ಸದ್ಬೋಧ ಚಂದ್ರಿಕೆಯ

ಕಾಣಿಕೆಯ ಪುಸ್ತಕ.

# ವಿಷಕುಂಭ.

(ಸಾಮಾಜಿಕ ಕಾದಂಬರಿ.)




ಲೇಖಕ—

ರಾಮಚಂದ್ರ ತ್ರ್ಯಂಬಕ ಕರ್ಪೂರ,

ಮ್ಯಾನೇಜರ, ಸ. ಚ. ಆನಂದವನ.



ಪ್ರಕಾಶಕ—

ವಾಯ್. ಜಿ. ಕುಲಕರ್ಣಿ,

ಎಡಿಟರ, ಸ. ಚ. ಆನಂದವನ.





೧೯೨೭

ಬೆಲೆ ೪ ಆಣೆ. ಟ. ಖ. ಬೇರೆ.

ಸದ್ಬೋಧ ಚಂದ್ರಿಕೆಯ

ಕಾಣಿಕೆಯ ಪುಸ್ತಕ.

# ವಿಷಕುಂಭ.

(ಸಾಮಾಜಿಕ ಕಾದಂಬರಿ.)



ಲೇಖಕ—

ರಾಮಚಂದ್ರ ತ್ರ್ಯಂಬಕ ಕರ್ಪೂರ,

ಮ್ಯಾನೇಜರ, ಸ. ಚ. ಆನಂದವನ.

ಪ್ರಕಾಶಕ—

ವಾಯ್. ಜಿ. ಕುಲಕರ್ಣಿ,

ಎಡಿಟರ, ಸ. ಚ. ಆನಂದವನ.



೧೯೨೭

ಬೆಲೆ ೪ ಆಣೆ. ಟ. ಖ. ಬೇರೆ.

# ವಿಷಕುಂಭ.



## (ಬಿ) ಎಸ್. ಎಮ್. ರೇಲ್ವೆ.



ಮಧ್ಯಾಹ್ನದ ಒಂದು ಬಾರಿಸುವ ಸಮಯವಾಗಿತ್ತು. ಮಾರ್ಮಗೋವೆಯ ಕಡೆಗೆ ಹೋಗುವ ಎಸ್. ಎಮ್. ರೇಲ್ವೆಯ ಒಂದು ಗಾಡಿಯು ಲೋಂಡಾದಿಂದ ಅದೇ ಹೊರಟಿತ್ತು. ಒಂದು ಡಬ್ಬೆಯಲ್ಲಿ ಒಬ್ಬ ತರುಣಿಯು ಕಿಟಿಕಿಗೆ ಹೊಂದಿ ಕುಳಿತುಕೊಂಡಿದ್ದಳು. ಆಕೆಯ ವಯಸ್ಸು ಹದಿನೆಂಟರ ಮೇಲೆ ಇಪ್ಪತ್ತರ ಒಳಗೆ ಇದ್ದಿತು. ಆಕೆಯ ವರ್ಣವು ಶುದ್ಧ ಬಂಗಾರವನ್ನು ಹೋಲುತ್ತಿತ್ತು. ಆಕೆಯ ಮುಖದ ಮೇಲೆ ಶಾಂತ ಹಾಗು ಗಂಭೀರ ಕಳೆಯು ಮಿನುಗುತ್ತಲಿತ್ತು. ಆಕೆಯು ಸೃಷ್ಟಿಸೌಂದರ್ಯವನ್ನು ಅವಲೋಕಿಸುವದರಲ್ಲಿ ತಲ್ಲೀನಳಾಗಿರುವಳೆಂದು ತೋರುತ್ತಿದ್ದರೂ ಆ ಸೃಷ್ಟಿಸೌಂದರ್ಯದ ಕಡೆಗೆ ಆಕೆಯ ಲಕ್ಷವು ಸ್ವಲ್ಪಾದರೂ ಇರಲಿಲ್ಲ; ಯಾವದೋ ಒಂದು ಭಾವೀ ಸುಖದ ಮನೋರಾಜ್ಯದಲ್ಲಿ ಆಕೆಯು ವಿಹರಿಸುತ್ತಿರುವಳೆಂಬದು ಆಕೆಯ ಕೋಮಲ ಗಲ್ಲಗಳ ಮೇಲೆ ಆಗಾಗ್ಗೆ ಮಿನುಗುವ ಮಂದಸ್ಮಿತದಿಂದ ಸ್ಪಷ್ಟವಾಗಿ ಕಂಡುಬರುತ್ತಿತ್ತು.

ಲೋಂಡಾದಿಂದ ಮಾರ್ಮಗೋವೆಯ ಕಡೆಗಿನ ಪ್ರದೇಶದಲ್ಲಿ ಸೃಷ್ಟಿಸೌಂದರ್ಯವು ಅಪ್ರತಿಮವಾಗಿರುತ್ತದೆ. ಆ ನಿಸರ್ಗದ ಅತರ್ಕ್ಯ ರಚನೆಯ ನಿರೀಕ್ಷಣದಿಂದ ಮನುಷ್ಯನು ಬೆರಗಾಗಿ ಹೋಗುವನು. ಕ್ಯಾಸಲರಾಕ ಸ್ಟೇಶನ್ನದಿಂದ ಸ್ವಲ್ಪ ಅಂತರದ ಮೇಲೆ ದೂಧಸಾಗರದ ದಭದಭೆಯು ಹತ್ತುವದು. ಅಹಾ! ಈ ದೂಧಸಾಗರದ ನೋಟವು ಅತ್ಯಂತ ಪ್ರೇಕ್ಷಣೀಯವಾಗಿರುತ್ತದೆ. ಇದನ್ನು ನೋಡುವ ಮನುಷ್ಯನು ಎವೆಗೆ ಎವೆ ಹಚ್ಚದೆ ಚಿತ್ರದಲ್ಲಿಯ ಗೊಂಬೆಯಂತೆ ಕುಳಿತುಕೊಳ್ಳುವನು. ಈ ಪ್ರಚಂಡ ದಭದಭೆಯ ದೃಶ್ಯವು ಕಲಾಕೋವಿದನಾದ ಮಾನವನ ಗರ್ವವನ್ನು ತೃಣೀಕರಿಸಿ ನಗುತ್ತದೋ ಎಂಬಂತೆ ಭಾಸವಾ

ಗುತ್ತದೆ. ಈ ಸಾಗರದ ಸೌಂದರ್ಯವಲ್ಲದೆ ದಟ್ಟವಾಗಿ ಬೆಳೆದ ವೃಕ್ಷಗಳು, ಗಗನಚುಂಬಿತವಾಗಿ ಬೆಳೆದ ತೆಂಗು, ತಾಳೆ ಮೊದಲಾದವುಗಳು, ವಿವಿಧ ವನಸ್ಪತಿಗಳು ಪ್ರೇಕ್ಷಣೀಯವಾಗಿ ತೋರುತ್ತವೆ; ಆದರೆ ಆ ತರುಣಿಯು ಭಾವೀಸುಖದ ಮನೋರಾಜ್ಯದಲ್ಲಿ ತಲ್ಲೀನಳಾದ್ದರಿಂದ ಆ ಅಪೂರ್ವ ಸೃಷ್ಟಿಸೌಂದರ್ಯದ ಸುಖಾನುಭವವು ಆಕೆಗೆ ದೊರೆಯಲಿಲ್ಲ. ಸಿನೇಮಾದ ಚಿತ್ರಗಳಂತೆ ಮೇಲಿಂದ ಮೇಲೆ ಬರುವ ದೃಶ್ಯಗಳನ್ನು ಆಕೆಯು ಲಕ್ಷಿಸುತ್ತ ನಡೆದಿದ್ದಳು.

ಈ ದಿನ ತಾನು ಗಾಡಿಯಲ್ಲಿ ಕುಳಿತು ಪ್ರವಾಸ ಮಾಡೇನೆಂಬ ಕಲ್ಪನೆಯು ಆಕೆಗೆ ಎಂಟು ದಿನಗಳ ಹಿಂದೆ ಸ್ವಪ್ನದಲ್ಲಿ ಕೂಡಾ ಬಂದಿರಲಿಲ್ಲ. ಆಕೆಯು ಮುಂಬಯಿಯಲ್ಲಿ ಕಾಮಾ ಎಂಬ ಹಾಸ್ಪಿಟಲ್ಲಿನಲ್ಲಿ ನರ್ಸಳಾಗಿ ಕಾಲಕ್ರಮಣ ಮಾಡುತ್ತಿದ್ದಳು. ಆಕೆಯು ಅನಿವಾರ್ಯವೆಂದು ನರ್ಸಳಾಗಿದ್ದಳು. ಆಕೆಯು ಸುಶೀಲೆಯಾಗಿದ್ದು, ಹೆಸರಿಗೆ ತಕ್ಕಂತೆ ನಿರ್ಮಲಮನಸ್ಸಿನವಳಾಗಿದ್ದಳು.

ಗೋಮಾಂತಕದಲ್ಲಿ ವಳವಯಿ ಎಂಬ ಹಳ್ಳಿಯಲ್ಲಿ ಆಕೆಯ ಸೋದರ ಮಾವನಿರುತ್ತಿದ್ದನು. ಆದರೆ ತನ್ನೊಬ್ಬ ಸೋದರ ಮಾವನು ಜಗತ್ತಿನಲ್ಲಿ ಎಲ್ಲಿಯೋ ಒಂದು ಕಡೆಗೆ ಇರುವನೆಂಬದಷ್ಟೇ ನಿರ್ಮಲೆಗೆ ಗೊತ್ತಿತ್ತಲ್ಲದೆ ಹೆಚ್ಚಿಗೇನೂ ಗೊತ್ತಿರಲಿಲ್ಲ. ಆದರೆ ಎಂಟುದಿನಗಳ ಹಿಂದೆ ಆಕೆಗೆ ಆ ಸೋದರ ಮಾವನ ಪತ್ರವೊಂದು ಬಂದಿತ್ತು. ಆದ್ದರಿಂದ ಆಕೆಯು ಹರುಷನಿರ್ಭರಳಾಗಿ ಈ ದಿನ ಸೋದರಮಾವನ ಕಡೆಗೆ ಹೊರಟಿದ್ದಳು.

ನಿರ್ಮಲೆಯು ಕುಳಿತ ಗಾಡಿಯು ಕ್ಯಾಸಲ್‌ರಾಕ ಸ್ಟೇಷನ್ನದಿಂದ ಹೊರಟಿತು. ಮುಂದೆ ಸ್ವಲ್ಪ ಹೊತ್ತಿನಲ್ಲಿಯೇ ದೂಧಸಾಗರದ ದೃಶ್ಯವು ಕಾಣಹತ್ತಲು ಗಾಡಿಯಲ್ಲಿ ಕುಳಿತ ಜನರು ಅಹಾ! ಬಂತು! ನೋಡಿರಿ! ನೋಡಿರಿ! ಎಂದೆನ್ನುತ್ತ ಕಿಡಕಿಯ ಕಡೆಗೆ ಧಾವಿಸ ತೊಡಗಿದರು. ಗಾಡಿಯಲ್ಲಿ ದೊಡ್ಡ ಗೊಂದಲವೇ ಎದ್ದಿತು. ಹುಡುಗರ-ಹೆಂಗಸರ-ಗಂಡಸರ ತಲೆಗಳು ಕಿಡಕಿಯ ಹೊರಗೆ ಶೋಭಿಸತೊಡಗಿದವು. ದೂಧಸಾಗರದ ಹೃದಯಂಗಮದೃಶ್ಯವು ನಿಚ್ಚಳವಾಗಿ ಕಾಣತೊಡಗಿತು. ಸಾಗರಕ್ಕೆ ಮಾನಕೊಡುವದಕ್ಕಾಗಿ ಗಾಡಿಯು ಸಿಳ್ಳುಹಾಕಿತು. ಗಾಡಿಯಲ್ಲಿ ಈ ಬಗೆಯ ಗೊಂದಲವೆದ್ದರೂ ನಿರ್ಮಲೆಯ ಲಕ್ಷವು ಆ ಕಡೆಗೆ ಹೋಗಲಿಲ್ಲ. ಆಕೆಯು ಪೋಲಕೆಯ ಕಿಸೆಯಲ್ಲಿರುವ ಮಾವನ ಪತ್ರವನ್ನು ಹೊರತೆಗೆದು ಪ್ರೀತಿಯಿಂದ ಓದಲಾರಂಭಿಸಿದಳು. ಪ್ರಿಯವಾಚಕರೇ, ಆ ತರುಣಿಯನ್ನು ಮೋಹಗೊಳಿಸಿದ ಆ ಪತ್ರದಲ್ಲಿ ಅಂಥ ಸಂಗತಿ ಯಾವದಿರಬಹುದು?

ಆಕೆಯೊಡನೆ ನಾವೂ ಆ ಪತ್ರವನ್ನೋದೋಣ ನಡೆಯಿರಿ!!

"ಅನೇಕಾಶೀರ್ವಾದಗಳು—ತಂಗೀ, ಒಹುದಿವಸಗಳಿಂದ ನಿನ್ನ ಶೋಧದಲ್ಲಿದ್ದೆನು. ನಿನಗೂ ನಿನ್ನ ಅತ್ತೆಗೂ ಭೆಟ್ಟಿಯಾಗುವ ಯೋಗವಿಲ್ಲದ್ದರಿಂದ ಆಕೆ ಇರುವ ವರೆಗೆ ನಿನ್ನ ಶೋಧವು ಹತ್ತಲಿಲ್ಲ. ದುರ್ದೈವಿಯಾದ ಆಕೆಯು ನಿನ್ನನ್ನು ಸ್ಮರಿಸುತ್ತ ಇಂದಿಗೆ ಒಂದು ತಿಂಗಳ ಕೆಳಗೆ ಕಾಲಾಧೀನಳಾದಳು!! ತಂಗೀ, ವೃದ್ಧಾಪ್ಯದಲ್ಲಿ ನನಗೆ ಅತಿಶಯ ದುಃಖವಾಯಿತು. ಹೊಟ್ಟೆಯಲ್ಲಿ ಸಂತತಿಯಿಲ್ಲದ್ದರಿಂದ ಹತ್ತರ ನಾಲ್ಕು ದುಡ್ಡು ಇದ್ದರೂ ಅದನ್ನು ಉಪಭೋಗಿಸುವವರು ಇಲ್ಲದಂತಾಗಿದೆ. ತಂಗೀ, ನನ್ನೊಬ್ಬ ಸ್ನೇಹಿತನಿಂದ ನೀನಿರುವ ಸ್ಥಳವು ನನಗೆ ಈಗ ಗೊತ್ತಾಯಿತು. ನೀನು ನನ್ನ ಮಗಳಂತಿರುತ್ತೀ ನೀನು ನನ್ನ ಹತ್ತರ ಇದ್ದು ನನ್ನನ್ನು ಸಂರಕ್ಷಿಸಿದರೆ ನಾನು ಶೇಷಾಯುಷ್ಯವನ್ನು ಸಮಾಧಾನದಿಂದ ಕಳೆಯುವೆನು. ನೀನಿನ್ನೂ ಅವಿವಾಹಿತಳಿರುತ್ತೀ ಎಂದು ಕೇಳಿದ್ದೇನೆ. ಈ ಪ್ರಾಂತದಲ್ಲಿ ನನ್ನ ವರ್ಚಸ್ಸು ಚನ್ನಾಗಿ ಇದ್ದದರಿಂದ ನಿನಗೆ ಶ್ರೀಮಂತ ವರನನ್ನು ನೋಡಿ ನಿನ್ನ ವಿವಾಹ ಮಾಡುವೆನು. ಹಾಗು ನನ್ನ ಆಸ್ತಿಯನ್ನೆಲ್ಲ ನಿನಗೆ ಕೊಡುವೆನು. ಆದ್ದರಿಂದ ಈ ಪತ್ರ ಕಂಡಕೂಡಲೆ ಬೇರೆ ಆಲೋಚನೆಯನ್ನು ಮಾಡದೆ ಗಾಡಿಯಲ್ಲಿ ಕುಳಿತುಕೋ. ಗೋಮಾಂತಕದಲ್ಲಿರುವ ಸಾಂವರಡೆ ಎಂಬ ಸ್ಟೇಶನ್ನಿಗೆ ತೀಕೀಟ ತೆಗೆಯಿಸು. ಮಾತ್ರ ಹೊರಡುವ ಮುಂದೆ ನನಗೆ ಒಂದು ಪತ್ರಬರೆ; ಅಂದರೆ ಸ್ಟೇಶನ್ನಿಗೆ ನಾನು ಕರೆಯ ಬರುತ್ತೇನೆ. ಪತ್ರದಲ್ಲಿ ಹೆಚ್ಚಿಗೆ ಬರೆಯುವ ಕಾರಣವಿಲ್ಲ. ಇತಿ ಆಶೀರ್ವಾದಗಳು."

ಪ್ರಿಯವಾಚಕ! ಮಾವನ ಈ ಪತ್ರ ಬಂದಂದಿನಿಂದ ನಿರ್ಮಲೆಗೆ ಮನಸ್ಸಿನ ಚಾಂಚಲ್ಯತೆಯುತ್ಪನ್ನವಾಯಿತು. ಮೇಲೆ ಹೇಳಿದಂತೆ ಆಕೆಗೆ ನರ್ಸಳಾಗಿರುವದರಲ್ಲಿ ವಿಶೇಷ ಪ್ರೀತಿಯಿರಲಿಲ್ಲ ಮರ್ಯಾದೆಯಿಂದ ಚರಿತಾರ್ಥಸಾಗಬೇಕೆಂದು ಆಕೆಯು ಆ ಕೆಲಸವನ್ನು ಕೈಕೊಂಡಿದ್ದಳು. ಇಂಥ ಸ್ಥಿತಿಯಲ್ಲಿ ಮಾವನ ಪತ್ರ ಬಂದದ್ದೆಂದರೆ ತೂಕಡಿಸುವವರಿಗೆ ಹಾಸಿಗೆ ಹಾಸಿ ಕೊಟ್ಟಂತಾಯಿತು. ಆಕೆಯು ಆ ಕೂಡಲೆ ತನ್ನ ಕೆಲಸಕ್ಕೆ ರಾಜೀನಾಮೆಯನ್ನು ಕೊಟ್ಟು ಮನೆಯಲ್ಲಿದ್ದ ಪದಾರ್ಥಗಳ ವ್ಯವಸ್ಥೆ ಮಾಡಿ ಸ್ಟೇಶನ್ನಿಗೆ ಬಂದಳು. ಆಕೆಗೆ ಗೋಮಾಂತಕದ ಮಾಹೀತಿಯು ಇರಲಿಲ್ಲ. ಸ್ಟೇಶನ್ನಿಗೆ ಮಾವನು ಕರೆಯ ಬರುವನೆಂಬದರ ಮೇಲೆಯೇ ಪೂರ್ಣ ಭರವಸೆಯನ್ನಿಟ್ಟು ತಾನು ಹೊರಡುವ ಮುನ್ನಾದಿನ ಮಾವನಿಗೊಂದು ಪತ್ರವನ್ನು ಬರೆದಳು. ಪಾಪ! ಆ ಹೆಣ್ಣುಮಗಳಿಗೇನು ಗೊತ್ತು! ಗೋಮಾಂತಕ

ದಲ್ಲಿ ಪತ್ರಗಳು ಬೇಗನೆ ಮುಟ್ಟುವದಿಲ್ಲೆಂಬದು!! ಹಳ್ಳಿಪಳ್ಳಿಗಳಲ್ಲಂತೂ ಪತ್ರಗಳ ಪ್ರವೇಶವಾಗುವದೇ ದುಸ್ತರವಿರುತ್ತದೆ. ನಿರ್ಮಲಾಬಾಯೀ! ಎಂಥ ತಪ್ಪು ಮಾಡಿದೆಯಲ್ಲ? ಗೋಮಾಂತಕವೆಂದರೆ ಪುಣೆ ಮುಂಬೈಗಳೆಂದು ಮಾಡಿರುವೆಯಾ?

ನಿರ್ಮಲೆಯು ಲೋಂಡಾಸ್ಟೇಶನ್ನದಲ್ಲಿಳಿದಾಗ ಒಬ್ಬ ತರುಣನ ದೃಷ್ಟಿಯು ಆಕೆಯ ಮೇಲೆ ಬಿದ್ದಿತು. ತರುಣನು ಮೂವತ್ತು ವರುಷದ ಒಳ ಹೊರಗಿನವನಿದ್ದನು. ಅವನು ವೈಕೈಯಿಂದ ಪುಷ್ಟನಾಗಿದ್ದನು. ಅವನ ನಿಲುವಿಕೆಯಾದರೂ ಚನ್ನಾಗಿತ್ತು. ಅವನು ಸಾದಗಪ್ಪಿನವನಿದ್ದು, ಅವನ ಮೋರೆಯ ಮೇಲೆ ಉಗ್ರಕಳೆಯು ವ್ಯಕ್ತವಾಗುತ್ತಿತ್ತು. ಅವನು ಕಿವಿಯಲ್ಲಿ ದೊಡ್ಡ ಮುತ್ತಿನ ಬಾವುಲಿಗಳನ್ನು ಹಾಕಿದ್ದು, ಶ್ರೀಮಂತ ಸಭ್ಯಮನುಷ್ಯನಿಗೆ ಶೋಭಿಸುವ ಪೋಷಾಕನ್ನು ಧರಿಸಿದ್ದನು. ನಿರ್ಮಲೆಯನ್ನು ನೋಡಿದ ಕೂಡಲೆ ಆಕೆಯ ವೇಷ-ಭಾಷಣಗಳಿಂದ ಆಕೆಯು ಯಾರಿರಬಹುದೆಂಬದನ್ನು ತಿಳಿದನು. ಪರರ ಹೃದ್ಗತವನ್ನು ಅವರ ಮುಖಚರ್ಯದಿಂದಲೇ ಕಂಡು ಹಿಡಿಯುವಷ್ಟು ಧೂರ್ತತೆಯು ಅವನಲ್ಲಿತ್ತು. ಈ ತರುಣಿಯು ಪುಣೆ-ಮುಂಬೈಗಳ ಕಡೆಯುವಳಿದ್ದು, ಸಂಗಡಿಗರಿಲ್ಲದೆ ಬಂದಿರುವಳೆಂಬದು ಕೂಡಲೆ ಅವನ ಲಕ್ಷದಲ್ಲಿ ಬಂದಿತು. ಅದರಂತೆ ಈಕೆಯು ಗೋಮಾಂತಕಕ್ಕೆ ಹೋಗುವ ಗಾಡಿಯ ನಿರೀಕ್ಷೆ ಮಾಡುತ್ತಲಿರುವಳೆಂಬದೂ ಆ ಪ್ರಾಂತದ ಮಾಹಿತಿಯು ಈಕೆಗೆ ಇಲ್ಲೆಂಬದೂ ಅವನ ಲಕ್ಷದಲ್ಲಿ ಬಾರದೆ ಹೋಗಲಿಲ್ಲ. ಆತನು ಆಕೆಯ ಸಮೀಪದಲ್ಲಿಯೇ ಅಡ್ಡಾಡಹತ್ತಿದನು. ಮಾವನ ಪತ್ರದ ಗುಂಗಿನಲ್ಲಿದ್ದ ನಿರ್ಮಲೆಗೆ ಈ ಯಾವ ಸಂಗತಿಯೂ ಗೊತ್ತಾಗಲಿಲ್ಲ.

ತರುಣನಿಗೆ ಖಂಡೇರಾಯನೆಂಬ ಹೆಸರಿತ್ತು. ನಿರ್ಮಲೆಯು ಕುಳಿತ ಡಬ್ಬಿಯಲ್ಲಿಯೇ ಅವನೂ ಕುಳಿತನು. ಆದರೆ ಖಂಡೇರಾಯನ ಲಕ್ಷವೆಲ್ಲ ನಿರ್ಮಲೆಯ ಮೇಲಿದ್ದಂತೆ ನಿರ್ಮಲೆಯ ಲಕ್ಷವು ಖಂಡೇರಾಯನ ಮೇಲೆ ಇದ್ದಿಲ್ಲ. ಆಕೆಯು ಅವನನ್ನು ನೋಡಿದ್ದಿಲ್ಲ ಸಹ. ಧೂರ್ತನಾದ ಖಂಡೇರಾಯನು ನಿರ್ಮಲೆಯನ್ನು ತನ್ನ ಬಲೆಯಲ್ಲಿ ಹಿಡಿಯಬೇಕೆಂದು ಹೊಂಚು ಹಾಕಿ ಆಕೆಯನ್ನು ಮಾತಾಡಿಸಬೇಕೆಂದು ಪ್ರಸಂಗವನ್ನು ನಿರೀಕ್ಷಿಸಹತ್ತಿದ್ದನು. ಕ್ಯಾಸಲರಾಕ ಸ್ಟೇಶನ್ನ ದಾಟಿದ ಬಳಿಕ ಮೇಲೆ ಹೇಳಿದಂತೆ ದೂಧಸಾಗರ ನೋಡುವದಕ್ಕಾಗಿ ಗಾಡಿಯಲ್ಲಿ ಗೊಂದಲವೇಳಲು ಖಂಡೇರಾಯನು ನಿರ್ಮಲೆಯ ಎದುರಿಗಿನ ಬೆಂಚಿನಮೇಲೆ ಬಂದು ಕುಳಿತನು. ಮತ್ತು ದೊಡ್ಡ ಧ್ವನಿಯಿಂದ ಹೋ, ಹೋ

ಎಂದು ಒದರಿದನು. ಆತನ ಆ ಪ್ರಚಂಡ ಧ್ವನಿಯಿಂದ ನಿರ್ಮಲೆಯು ಪತ್ರ ವಾಚನವನ್ನು ಬಿಟ್ಟು ಮೇಲಕ್ಕೆ ಮುಖವೆತ್ತಿ ನೋಡಿದಳು. ಎದುರಿಗೆ ಭವ್ಯ ನಾದ ಒಬ್ಬ ಕಾಳಪುರುಷನು ಕುಳಿತಿದ್ದು, ಆತನದೇ ಈ ಪ್ರಚಂಡ ಶಬ್ದವೆಂಬದು ಆಕೆಗೆ ಗೊತ್ತಾಯಿತು. ಅವನನ್ನು ನೋಡಿದ ಕೂಡಲೆ ನಿರ್ಮಲೆಯ ಎದೆಯು ಧಸ್ಸೆಂದಿತು. ಆಕೆಯ ಲಕ್ಷವು ಹೀಗೆ ತನ್ನ ಕಡೆಗೆ ಹೊರಳಲು ಖಂಡೇರಾಯನು ತನ್ನ ಕೆಲಸವಾಯಿತೆಂದು ಸಂತೋಷವತಾಳಿ ನಿರ್ಮಲೆಯನ್ನುದ್ದೇಶಿಸಿ— "ನೀವು ಪುಣೆ ಮುಂಬಯಿಗಳ ಕಡೆಯವರೆಂಬಂತೆ ತೋರುತ್ತದೆ. ಅತ್ತಕಡೆಗೆ ಈ ದೂಧಸಾಗರದಂಥ ಅವರ್ಣನೀಯ ದೃಶ್ಯಗಳಿರುವವೇನು? ಎಂದು ಪ್ರಶ್ನೆ ಮಾಡಿದನು. ನಿರ್ಮಲೆಯು ಖಂಡೇರಾಯನ ಈ ಪ್ರಶ್ನೆಗೆ ಉತ್ತರಕೊಡದೆ ಪುನಃ ಪತ್ರವನ್ನು ನೋಡಲಾರಂಭಿಸಿದಳು. ತನ್ನ ಪ್ರಶ್ನಗೆ ಉತ್ತರವು ಸಿಗಲಿಲ್ಲೆಂದು ಆ ಧೂರ್ತ ತರುಣನು ನಿರಾಶನಾಗಲಿಲ್ಲ. ಅವನು ಮತ್ತಿಷ್ಟು ಸರಿದು ಕುಳಿತು—ನೀವು ಎಲ್ಲಿಗೆ ಹೋಗಬೇಕು? ಎಂದು ಪುನಃ ಪ್ರಶ್ನವಾಡಿದನು.

ತರುಣನ ಈ ಪ್ರಶ್ನೆಗೆ ಉತ್ತರಕೊಡುವದು ನಿರ್ಮಲೆಯ ಮನಸ್ಸಿನಲ್ಲಿರಲಿಲ್ಲ. ಆದರೆ ಯಾರಾದರೂ ಗೃಹಸ್ಥರು ಮಾತಾಡಿಸಿದರೆ ಉತ್ತರಕೊಡದೆ ಇರುವದು ಶಾಲೀನತೆಗೆ ಉಚಿತವಾಗುವದಿಲ್ಲೆಂದು ತಿಳಿದು ಆಕೆಯು—ವಳವಯಿಗೆ ಹೋಗಬೇಕೆಂದು ಅಧೋವದನದಿಂದಲೇ ಉತ್ತರಕೊಟ್ಟಳು. ಎಳೆಸಿಕ್ಕರೆ ಹಚ್ಚಡ ನುಂಗುವ ಆ ಖಂಡೇರಾಯನು ಪುನಃ ಪ್ರಶ್ನೆಗಳ ಮಾಲಿಕೆಯನ್ನೇ ಪ್ರಾರಂಭಿಸಿದನು. ಆಗ ಅವನು—

"ವಳವಯಿಗೆ ಹೋಗಬೇಕೊ? ಅಲ್ಲಿ ಯಾರಕಡೆಗೆ?"

"ವಳವಯಿಯಲ್ಲಿ ನನ್ನ ಮಾವನಿದ್ದಾನೆ."

"ನಿಮ್ಮ ಮಾವನ ಹೆಸರೇನು?"

"ರಾಮುಭಾವು ಜೋಸಿ"

"ನೀವು ಎಲ್ಲಿಂದ ಬಂದಿರಿ?"

"ಮುಂಬಯಿಯಿಂದ"

"ಓಹೋ, ರಾಮುಭಾವು ಜೋಸಿಯವರ ಸೋದರಸೊಸೆ ನೀವೇ ಏನು?"

"ನಿಮಗೆ ರಾಮುಭಾವು ಜೋಸಿಯವರ ಗುರ್ತು ಎಲ್ಲಿಯದು?"

"ನನಗೆ ರಾಮುಭಾವು ಜೋಸಿಯವರ ಗುರ್ತವೇ? ಬರಿಯ ಗುರುತವಿಷ್ಟೇ ಯಾಕೆ, ನನಗೆ ಅವರು ಕೇವಲ ಮಿತ್ರರು. ನಾನೂ ಅವರೂ ಬಂದೇ

ಮನೆಯವರಂತೆ ನಡಕೊಳ್ಳುತ್ತೇವೆ. ಈಗ ನಾನು ಅವರ ಭೆಟ್ಟಿಗೋಸ್ಕರವಾಗಿಯೇ ಹೊರಟಿದ್ದೇನೆ''

"ಇದು ನಿಜವೇ?'' ಎಂದು ನಿರ್ಮಲೆಯು ನುಡಿದಳು ಮಾತ್ರ; ಆಕೆಯ ಎದೆಯು ದಡದಡ ಹಾರಲಾರಂಭಿಸಿತು.

"ಭಲಾ, ಯೋಗವೆಂದು ಇದಕ್ಕೇ ಅನ್ನುವರು. ನಿಮ್ಮ ಹೆಸರು ಬಹು ತರವಾಗಿ............''

"ನಿರ್ಮಲೆ'' ಎಂದು ನಿರ್ಮಲಾಬಾಯಿಯು ಕೂಡಲೆ ಉತ್ತರಕೊಟ್ಟಳು.

"ಬೀಡೀ ಸೇದುತ್ತ ಖಂಡೇರಾಯನು ಅಚ್ಛಾ ಎಂದು ನುಡಿದು ನಿರ್ಮಲಾಬಾಯೀ, ನನ್ನ ನಿಮ್ಮ ಭೆಟ್ಟಿಯಾದದ್ದು ಬಹಳ ಉತ್ತಮವಾಯಿತು. ನೀವು ಹೆಣ್ಣುಮಕ್ಕಳು. ಈ ಗೋವೆಯ ಪ್ರಾಂತದಲ್ಲಿ ಎಂದೂ ಕಾಲಿಟ್ಟಿರಲಿಕ್ಕಿಲ್ಲ ಎಂದು ಅಂದನು.''

"ನಾನು ಈ ಪ್ರಾಂತಕ್ಕೆ ಬಂದದ್ದು ಇದೇ ಮೊದಲು'' ಎಂದು ನಿರ್ಮಲೆಯು ನುಡಿದಳು.

"ಒಳ್ಳೇ ಮಾಹಿತಿಗಾರನಿಲ್ಲದೆ ಈ ಪ್ರಾಂತದಲ್ಲಿ ಅಡ್ಡಾಡುವದು ಕಠಿಣವಿರುತ್ತದೆ. ಯಾಕಂದರೆ ನಾಲ್ಕುದಿಕ್ಕಿಗೂ ಗುಡ್ಡಗಳಿರುತ್ತವೆ. ಚಕ್ರವ್ಯೂಹ ಕೋಟಿಯಲ್ಲಿ ಸೇರಿದಂತಾಗುತ್ತದೆ. ಅರಿಯದ ಮನುಷ್ಯರು ಒಂದು ಗುಡ್ಡಕ್ಕೇ ಪ್ರದಕ್ಷಿಣೆ ಹಾಕಬೇಕಾಗುತ್ತದೆ. ಅದಕ್ಕಾಗಿಯೇ ನಿರ್ಮಲಾಬಾಯೀ ನೀವು ನನಗೆ ಭೆಟ್ಟಿಯಾದದ್ದು ನೆಟ್ಟಗಾಯಿತೆಂದು ನುಡಿದೆನು.'' ಎಂದು ಖಂಡೇರಾಯನು ಮಾತನಾಡಿದನು.

"ನಮ್ಮ ಮಾವಂದಿರು ನನ್ನನ್ನು ಕರೆಯಲಿಕ್ಕೆ ಸಾಂವರಡೆ ಸ್ಟೇಶನ್ನಕ್ಕೆ ಬರುವರು.''

"ನಿರ್ಮಲಾಬಾಯೀ, ನಿಮ್ಮ ಮಾವಂದಿರೇ ಬರಬೇಕೆಂಬ ನೇಮವಿಲ್ಲ. ಈ ಖಂಡೇರಾಯನಿದ್ದರೆ ಅವರು ಇದ್ದಂತಾಯಿತು. ಆದರೆ ಬಾಯೀ, ನೀವು ನಿಮ್ಮ ಮಾವಂದಿರಿಗೆ ಪತ್ರಹಾಕಿ ಎಷ್ಟು ದಿವಸಗಳಾದವು?''

"ನಾನು ಹೊರಡುವ ಮುನ್ನಾದಿನ ಪತ್ರಹಾಕಿದ್ದೇನೆ''

"ನಿರ್ಮಲಾಬಾಯೀ, ಗೋವೆಪ್ರಾಂತವೆಂದರೆ ಪುಣೆ ಮುಂಬೈಯೆಂದು ಮಾಡಿರುವಿರೇನು? ಈ ಪ್ರಾಂತದಲ್ಲಿ ಅಷ್ಟೊಂದು ಸುಧಾರಣೆ ಇಲ್ಲ. ದೊಡ್ಡ ದೊಡ್ಡ ಶಹರಗಳಿಗೆ ಪತ್ರ ಮುಟ್ಟಬೇಕಾದರೇ ಪೂರ್ವದ ಪುಣ್ಯಬೇಕು, ಇಂಥ

ಸ್ಥಿತಿಯಲ್ಲಿ ಹಳ್ಳಿಪಳ್ಳಿಗಳನ್ನು ಕೇಳುವವರಾರು? ನೀನು ಮನೆಮುಟ್ಟಿದ ಹದಿನೈದು ದಿನಗಳ ಮೇಲೆ ನಿಮ್ಮ ಮಾವನಿಗೆ ಪತ್ರಬಂದರೆ ನಿಮ್ಮ ಪುಣ್ಯವೆಂದು ತಿಳಿಯು ಬೇಕು'' ಎಂದು ಖಂಡೇರಾಯನು ನುಡಿದನು.

ನಿರ್ಮಲಾಬಾಯಿಯು (ಗಾಬರಿಯಾಗಿ)—ಹೀಗೇನು ಖಂಡೇರಾವಜೀ, ಹಾಗಾದರೆ ಈ ದಿನ ಸ್ಟೇಶನ್ನಿಗೆ ನಮ್ಮ ಮಾವಂದಿರು ಬರುವ ಲಕ್ಷಣ ತೋರು ವದಿಲ್ಲ. ಮುಂದೆ ನನ್ನ ಗತಿಯೇನು? ಎಂದು ನುಡಿದಳು.

"ನಿರ್ಮಲಾಬಾಯೀ, ನಾನಿರಲು ನೀನೇಕೆ ಚಿಂತಿಸುತ್ತೀ? ಸಭ್ಯಜನರ ಚಿಂತೆಯು ದೇವರಿಗಿರುತ್ತದೆ. ನಾನು ಈ ದಿನ ಅಕಸ್ಮಾತ್ತಾಗಿ ಬರಬೇಕೆಲ್ಲಿ! ನಿಮ್ಮ ಡಬ್ಬಿಯಲ್ಲಿ ಕುಳಿತು ನಿಮ್ಮನ್ನು ಮಾತಾಡಿಸಬೇಕೆಂಬ ಬುದ್ಧಿ ನನಗೆ ಹುಟ್ಟ ಬೇಕೆಲ್ಲಿ! ಇದೆಲ್ಲವೂ ದೈವಲೀಲೆಯೇ ಆಗಿದೆ. ಪರಮೇಶ್ವರನೇ ಈ ಯೋಗವನ್ನು ಒದಗಿಸಿಕೊಟ್ಟದ್ದಾನೆ; ನಿರ್ಮಲಾಬಾಯೀ, ಈಗಿನ ಕಾಲವು ಕಠಿಣವಿರುತ್ತದೆ. ಜನರಲ್ಲಿ ದುರ್ಬುದ್ಧಿಯು ಹೆಚ್ಚಿರುತ್ತದೆ. ಸ್ತ್ರೀಯರಂತೂ ದುರ್ಜನರ ಕೈಯೊಳ ಗಿಂದ ಪಾರಾಗುವದೇ ಅಶಕ್ಯವಾಗಿರುತ್ತದೆ. ಈಗಿನ ದುಷ್ಟರು ತಾಯಿಯೆನ್ನು ವದಿಲ್ಲ-ಅಕ್ಕತಂಗಿಯರೆನ್ನುವದಿಲ್ಲ. ಪ್ರತ್ಯಕ್ಷ ಹೊಟ್ಟೆಯ ಮಕ್ಕಳನ್ನು ಸಹ ನೋಡುವದಿಲ್ಲ. ಬಹಳ ಹೇಳುವದೇನು? ಹೆಣ್ಣುಜಾತಿಯೊಂದಾದರೆ ಸಾಕು, ಯಾರಿದ್ದರೇನು? ಅವರು ಕಾಮಾಂಧರಾಗುವರು. ಇಂಥ ದುಷ್ಟವಾಸನೆಯು ಜನರು ಹೆಚ್ಚಿದ ಕಾಲದಲ್ಲಿ ಸ್ತ್ರೀಯರು ಮಾನದಿಂದ ಪಾರಾಗುವದೇ ಅಶಕ್ಯವಾ ಗಿರುತ್ತದೆ. ನಿರ್ಮಲಾಬಾಯೀ, ನೀನು ಈ ಪ್ರಾಂತಕ್ಕೆ ಹೀಗೆ ಒಬ್ಬೊಂಟಿಗಳಾಗಿ ಬಂದದ್ದು, ಬಹಳ ತಪ್ಪು ಮಾಡಿದೆ. ನೀನಿನ್ನೂ ಚಿಕ್ಕವಳು; ಜಗತ್ತಿನ ಅನುಭವವು ನಿನಗಿಲ್ಲ. ನಿಮ್ಮಂಥ ತರುಣಿಯರನ್ನು ಕಂಡರೆ ದುರ್ಜನರು ಮೋಸ ಮಾಡದೆ ಬಿಡರು. ನಿನ್ನ ಭಾಗ್ಯವು ಉತ್ತಮವಿದ್ದದ್ದರಿಂದಲೇ ದೇವರು ನನ್ನ ಹಾಗು ನಿಮ್ಮ ಭೇಟಿಯಾಗುವ ಯೋಗವನ್ನು ತಂದು ಕೊಟ್ಟಿರುವನು. ರಾಮಭಾವೂ ನಾನೂ ದೇಹಮಾತ್ರದಿಂದ ಬೇರೆ ಇರುವೆವೇಹೊರತು ಇಬ್ಬರ ಅಂತಃಕರಣಗಳೂ ಒಂದೇ ಇರುತ್ತವೆ; ನೀನು ರಾಮಭಾವೂನ ಸೋದರ ಸೊಸೆಯೆಂದ ಬಳಿಕ ನನಗೂ ಆದಂತಾಯಿತು; ನನಗೆ ಮುಡಗಾಂವಕ್ಕೆ ಹೋಗಿಬರುವ ಕೆಲಸವಿದ್ದು, ಆ ಬಳಿಕ ರಾಮಭಾವೂನ ಭೆಟ್ಟಿಗೆ ಹೋಗಬೇಕೆಂದು ಮಾಡಿದ್ದೆನು; ಆದರೆ ಈಗ ನಿಮ್ಮನ್ನು ರಾಮಭಾವೂನ ಬಳಿಗೆ ಮುಟ್ಟಿಸಹೊ ನಾನು ಎಲ್ಲಿಯೂ ಹೋಗಲಿಕ್ಕೆ ಮಾರ್ಗವಿಲ್ಲದಂತಾಯಿತು. ನಿರ್ಮಲಾಬಾಯೀ ಏನೂ ಚಿಂತೆ ಮಾಡಬೇಡ,

ನಿನ್ನ ಕೂದಲಿಗೆ ಧಕ್ಕಿಹತ್ತದಂತೆ ನಾನು ನಿನ್ನನ್ನು ವಳವಯಿಗೆ ಮುಟ್ಟಿಸುತ್ತೇನೆ ಹಾ! ಸಾಂವರಡೆ ಸ್ಟೇಶನ್ನಬಂದಿತು. ಸಿದ್ಧಳಾಗು, ಎಂದು ನುಡಿದನು.

ಖಂಡೇರಾಯನ ಈ ಸ್ವಾಧುವಾಣಿಯನ್ನು ಕೇಳಿ ನಿರ್ಮಲೆಯು ಸ್ವಲ್ಪ ಸಮಾಧಾನ ತಾಳಿದಳು. ಪಾಪ! ಆ ಖಂಡೇರಾಯನು ವಿಷಕುಂಭದಂತಿರುವನೆಂಬದು ಆಕೆಗೆ ಹೇಗೆ ಗೊತ್ತಾಗಬೇಕು? ಅಷ್ಟರಲ್ಲಿ ಸ್ಟೇಶನ್ನ ಬಂದದ್ದರಿಂದ ಆಕೆಯು ಚಟ್ಟನೆ ಎದ್ದು ನಿಂತಳು. ಆಕೆಯ ಸಾಮಾನುಗಳೆಂದರೆ ಹ್ಯಾಂಡಬ್ಯಾಗ ಒಂದಿತ್ತು. ರಾಮಭಾವೂ ಸ್ಟೇಶನ್ನಕ್ಕೆ ಬರುವದು ಶಕ್ಯವಿಲ್ಲದ್ದರಿಂದ ಖಂಡೇರಾಯನು ನಿಶ್ಶಂಕವಾಗಿ ನಿರ್ಮಲೆಯ ಹ್ಯಾಂಡಬ್ಯಾಗನ್ನು ತಕ್ಕೊಂಡು ಪ್ಲಾಟಫಾರ್ಮಿನ ಮೇಲೆ ಇಳಿದನು; ಮತ್ತು ರಾಮಭಾವೂನನ್ನು ಹುಡುಕುವವನಂತೆ ಅತ್ತ ಇತ್ತ ಓಡಾಡಲಾರಂಭಿಸಿದನು. ಖಂಡೇರಾಯನು ಇಳಿಯಲು ನಿರ್ಮಲೆಯೂ ಕೆಳಗಿಳಿದು ಮಾವನು ಬಂದಿರುವನೇನೆಂದು ಸುತ್ತಲೂ ನೋಡಹೊಡಗಿದಳು. ನಿರ್ಮಲೆಯು ಎಂಟು ವರುಷದವಳಿದ್ದಾಗ ಮಾವನನ್ನು ನೋಡಿದ್ದಳು. ತಿರುಗಿ ಇದುವರೆಗೆ ಆಕೆಗೆ ಮಾವನು ಕರ್‍ರಗಿರುವನೋ ಕೆಂಪಗಿರುವನೋ ಎಂಬದೇ ಗೊತ್ತಿರಲಿಲ್ಲ. ಯಾರಾದರೂ ತನ್ನ ಹೆಸರುಗೊಂಡು ಒದರುತ್ತ ಬರುವರೇನೆಂಬದನ್ನು ಮಾತ್ರ ಆಕೆಯು ನಿರೀಕ್ಷಿಸುತ್ತಿದ್ದಳು. ಜನರೆಲ್ಲರೂ ಇಳಿದು ಹೋದರು. ಗಾಡಿಯು ತನ್ನ ದಾರಿಯನ್ನು ಹಿಡಿದು ಹೊರಟಿತು. ಆಗ ಖಂಡೇರಾಯನು ನಿರ್ಮಲೆಯ ಬಳಿಗೆ ಬಂದು—ನಿರ್ಮಲಾಬಾಯೀ, ನಾನು ಹೇಳಿದ್ದು ನಿಜವಾಯಿತೋ ಇಲ್ಲವೋ? ನಿಮ್ಮ ಮಾವನಿಗೆ ಪತ್ರಮುಟ್ಟುವದು ಶಕ್ಯವೇ ಇಲ್ಲ. ನಡೆಯಿರಿ ಈ ಸ್ಟೇಶನ್ನದ ಬಲಭಾಗದಲ್ಲಿ ಒಂದು ಹಾಟೆಲ್ ಇರುವದು. ಅಲ್ಲಿ ಈ ದಿನ ಇದ್ದು ನಾಳಿಗೆ ಬೆಳಗ್ಗೆ ವಳವಯಿಯ ಕಡೆಗೆ ಹೋಗೋಣ; ಎಂದು ನುಡಿದನು.

ಖಂಡೇರಾಯನ ಈ ಮಾತುಗಳನ್ನು ಕೇಳಿ ನಿರ್ಮಲೆಯು ಭಯವಿಹ್ವಲಳಾಗಿ—ಆ, ಏನಂದಿರಿ? ಈ ದಿನ ವಳವಯಿಗೆ ಹೋಗುವದಿಲ್ಲವೇ? ಎಂದಳು. ವಳವಯಿಯು ಇಲ್ಲಿಂದ ದೂರದಲ್ಲಿದೆ. ಬೆಳಗ್ಗೆ ಹೊರಟರೆ ಸಂಜೆಗೆ ಮುಟ್ಟುವೆವು. ಮೇಲಾಗಿ ಅಲ್ಲಿಗೆ ಹೋಗಲಿಕ್ಕೆ ಈಗ ತಕ್ಕ ವಾಹನಗಳು ಸಿಗುವದಿಲ್ಲ. ನಾಳೆ ಬೆಳಗ್ಗೆ ಒಂದು ವಾಘರ ಹೊರಡುವದು. ಆಗ್ಗೇ ನಾವೂ ಹೋಗಬೇಕು. ನೀವು ದೂರಿನ ಪ್ರವಾಸದಿಂದ ದಣಿದುಕೊಂಡಿರುತ್ತೀರಿ. ಈ ದಿನ ಇಲ್ಲಿಯೇ ಇರೋಣ; ಎಂದು ನುಡಿಯುತ್ತ ಖಂಡೇರಾಯನು ಹಾಟೆಲ್ಲಿನ ಮಂದಿರವನ್ನು ಪ್ರವೇಶಿಸಿದನು. ಉಪಾಯವಿಲ್ಲದೆ ನಿರ್ಮಲೆಯೂ ಆತನ ಅನುಸರಣ ಮಾಡಿದಳು.

ಹಾಟೆಲ್ಲಿನ ಆ ವ್ಯವಸ್ಥೆಯನ್ನು ನೋಡಿ ನಿರ್ಮಲೆಗೆ ಅಸಹ್ಯವೆನಿಸಿತು. ಅನ್ನ ಹುಳಿಸಾರಿನ ಊಟವನ್ನು ಹ್ಯಾಗಾದರೂ ಮುಗಿಸಿದಳು. ಹಾಟೆಲ್ಲಿನಲ್ಲಿ ಜನರ ಗದ್ದಲಕ್ಕೆ ಕೊರತೆಯೇನು? ಅದರಲ್ಲೂ ಸ್ಟೇಶನ್ನಿನಲ್ಲಿದ್ದ ಹಾಟೇಲು; ೨೪ ತಾಸುಗಳ ವರೆಗೂ ಬರಹೋಗುವವರ ಗದ್ದಲವು ಇದ್ದಿತು. ನಿರ್ಮಲೆಗೆ ನಿದ್ದೆ ಬರದಾಯಿತು. ಜನರ ಗದ್ದಲದಲ್ಲಿ ಮಲಗಿ ಆಕೆಗೆ ಅಭ್ಯಾಸವಿಲ್ಲದ್ದರಿಂದ ಆಕೆಯು ಆ ದಿನ ಜಾಗರಣವನ್ನೇ ಮಾಡಬೇಕಾಯಿತು. ಖಂಡೇರಾಯನು ಮಾತ್ರ ನಿಶ್ಚಿಂತೆಯಿಂದ ಗೊರಕೆ ಹೊಡೆಯಲಾರಂಭಿಸಿದನು.

---

## (೫) ಸಂಕಟ.



ಮರುದಿನ ಬೆಳಗಾಯಿತು. ಖಂಡೇರಾಯನು ಎದ್ದು ಪ್ರಾತರ್ವಿಧಿಗಳನ್ನು ತೀರಿಸಿ ನಿರ್ಮಲೆಯ ಬಳಿಗೆ ಬಂದನು. ಅಷ್ಟರಲ್ಲಿ ನಿರ್ಮಲೆಯೂ ಪ್ರಾತರ್ವಿಧಿಗಳನ್ನು ತೀರಿಸಿ ಪ್ರಯಾಣ ಸನ್ನದ್ಧಳಾಗಿ ಕುಳಿತಿದ್ದಳು. ನಿರ್ಮಲೆಯು ಬೇಡ ಬೇಡವೆನ್ನುತ್ತಿದ್ದರೂ ಖಂಡೇರಾಯನು ಖಾನಾವಳಿಯವನ ರಾತ್ರೀ ಊಟದ ಚಾರ್ಜನ್ನು ತಾನೇ ಕೊಟ್ಟು ಸ್ಟೀಮಲಾಂಚ ಉರ್ಫ ಪಾಫರದ ಕಡೆಗೆ ನಡೆದನು. ಕಟಕನನ್ನು ಕುರಿಯು ಅನುಸರಣ ಮಾಡುವಂತೆ ನಿರ್ಮಲೆಯು ಆತನ ಬೆನ್ನಹತ್ತಿ ನಡೆದಳು. ಸ್ಟೀಮಲಾಂಚವು ಸಿದ್ಧವಾಗಿತ್ತು. ಖಂಡೇರಾಯನೂ ನಿರ್ಮಲೆಯೂ ಅದನ್ನೇರಿ ಕುಳಿತುಕೊಂಡರು. ಆ ಸ್ಟೀಮಲಾಂಚವು ನೂರಾರು ಜನ ಕೂಡ್ರುವಷ್ಟು ಪ್ರಶಸ್ತವಾಗಿತ್ತು. ಒಂದೇ ಅಂತಸ್ತು ಇದ್ದದ್ದರಿಂದ ಎಲ್ಲರೂ ಒಂದೇ ಕಡೆಗೆ ಕೂಡ್ರಬೇಕಾಗುತ್ತಿತ್ತು. ಪ್ರವಾಸಿಗಳಿಗೆ ಕೂಡ್ರಲಿಕ್ಕೆ ಅನುಕೂಲವಾಗುವಂತೆ ನಾಲ್ಕು ಬಾಜುಗಳಲ್ಲಿಯೂ ಬೆಂಚುಗಳನ್ನು ಹಾಕಿದ್ದರು. ಇದಲ್ಲದೆ ಕಂದಮೂಲ-ಹಣ್ಣುಹಂಪಲ ಇತರ ಫರಾಳದ ಸಾಮುಗ್ರಿ ಇವುಗಳನ್ನು ವಿಶೇಷವಾಗಿಟ್ಟಿದ್ದರು. ಗೋವೆಪ್ರಾಂತದಲ್ಲಿ ಮದ್ಯಸೇವನೆಯು ಅಪ್ರತಿಬಂಧವಾಗಿ ನಡೆಯುವದು. ಒಬ್ಬ ಹುಡುಗನು ಆ ಸ್ಟೀಮಲಾಂಚದಲ್ಲಿ ಮದ್ಯವನ್ನು ಮಾರಹೊರಟಿದ್ದನು. ನಿರ್ಮಲೆಗೆ ಅಲ್ಲಿಯ ಅಸಹ್ಯಾಚರಣೆಯನ್ನು ನೋಡಿ ತುಂಬಾ ಅಸಮಾಧಾನವಾಯಿತು. ಅಷ್ಟರಲ್ಲಿ ಸ್ಟೀಮಲಾಂಚವು ಬಂದರದಿಂದ

ಹೊರಟು ನಾಗಪೋಡಿಯಮೇಲೆ ಹೊರಳುತ್ತ ಒಂದು ಸಣ್ಣ ಖಾಡಿಯಲ್ಲಿ ನಡೆಯಿತು.

ಖಂಡೇರಾಯನು ತನ್ನ ನಿತ್ಯ ವ್ಯವಸಾಯದಂತೆ ಕಿಸೆಯೊಳಗಿನ ಬಾಟ್ಲಿಯನ್ನು ಹೊರದೆಗೆದು ಮದ್ಯವನ್ನು ಕೊಂಡು ಯಥೇಚ್ಛವಾಗಿ ಕುಡಿಯುತ್ತ—ನಿರ್ಮಲಾಬಾಯಿ, ನೋಡಿದೆಯಾ ಜಲಸಾಹ್ಯಾಗಿದೆ? ಎಂದು ನುಡಿದನು. ಆ ಮದ್ಯಸೇವನೆಯು ನಿಂದ್ಯಪ್ರಕಾರದಿಂದ ಅಸಮಾಧಾನತಾಳಿದ್ದ ಆ ಕೋಮಲೆಯು—ಏನು ಖಂಡೇರಾಯರೇ, ಇಲ್ಲಿಯ ಜನರಲ್ಲಿ ಸಭ್ಯತೆಯು ಕಂಡುಬರುವದಿಲ್ಲ. ಇಂಥ ಸ್ವೇಚ್ಛಾಚಾರಕ್ಕೆ ಸರಕಾರವು ಪ್ರತಿಬಂಧಮಾಡುವದಿಲ್ಲವೇ? ಎಂದಳು.

"ನಿರ್ಮಲಾಬಾಯಿ, ಮದ್ಯಸೇವನೆಯು ನಿಂದ್ಯವೆಂದು ತಿಳಿದಿರುವೆಯಾ? ಕಲಿಯುಗದಲ್ಲಿ ಅದಕ್ಕೆ ಭೂಲೋಕದ ಅಮೃತವೆಂಬ ಹೆಸರು ಬಂದಿದೆ. ಕೆಲ ಜನ ಮರುಳರು ಮಾತ್ರ ಈ ಅಮೃತ ಸೇವನೆಗೆ ಎರವಾಗುತ್ತಾರೆ. ವಾಸ್ತವವಾಗಿ ನೋಡಿದರೆ ಅವರೇ ದುರ್ದೈವಿಗಳೆನ್ನಬೇಕು. ಈ ಮದ್ಯ ವಿಕ್ರಯದಿಂದ ಸರಕಾರಕ್ಕೆ ವಿಪುಲ ದ್ರವ್ಯಸಂಗ್ರಹವಾಗುತ್ತದೆ. ಅವರು ಇದೊಂದು ಕಾಮಧೇನುವೆಂದೇ ತಿಳಿದಿರುವರು. ಬಾಯಿ, ತಮ್ಮ ಹಾನಿಯನ್ನು ಯಾರು ಮಾಡಿಕೊಳ್ಳುವರು? ನಮಗೆ ಹೀಗೆ ಅವರು ಸ್ವಚ್ಛಂದವೃತ್ತಿಗೆ ಮಾರ್ಗವಮಾಡಿಕೊಡದಿದ್ದರೆ ಅವರಿಗೆ ನಾಲ್ಕು ದುಡ್ಡು ರೊಕ್ಕ ಹೇಗೆ ಸಿಗಬೇಕು? ಸ್ವಂತಕ್ಕೆ ಲಾಭವಿಲ್ಲದೆ ಯಾರೂ ಯಾರಿಗೆ ಉಪಕಾರವನ್ನು ಮಾಡಹೋಗುವದಿಲ್ಲ. ಇದು ಜಗತ್ತಿನಲ್ಲಿ ನಡೆದುಬಂದು ಸಿದ್ಧಾಂತವಾತಾಗಿರುತ್ತದೆ." ಎಂದು ಖಂಡೇರಾಯನು ನುಡಿದನು.

ಖಂಡೇರಾಯನ ಈ ಭಾಷಣದಿಂದ ನಿರ್ಮಲೆಯ ಕಣ್ಣುಗಳು ನಿಚ್ಚಳವಾಗಿ ತೆರೆದವು. ಆತನ ಕಡೆಯ ವಾಕ್ಯದಿಂದಂತೂ ಆಕೆಯ ಹೃದಯಕ್ಕೆ ಕಾದಕಬ್ಬಿಣದಿಂದ ಬರೆಕೊಟ್ಟಂತಾಯಿತು. ಅವಳು ಖಂಡೇರಾಯನ ಮುಖವನ್ನು ದಿಟ್ಟಿಸಿ ನೋಡಿದಳು! ಅವನ ಆಗಿನ ಮುಖಭಾವದಿಂದ ಆಕೆಗೆ ತನ್ನ ಮುಂದಿನ ಭವಿತವ್ಯತೆಯ ಕಲ್ಪನೆಯು ಬರಲಾರಂಭಿಸಿತು. ಈತನು ಮಹಾದುಷ್ಟನಿದ್ದು, ಈತನ ಹಿತದೊಳಗೆ ಸಿಕ್ಕದ್ದು ದೊಡ್ಡ ತಪ್ಪಾಯಿತೆಂದು ಆಕೆಗೆ ಪಶ್ಚಾತ್ತಾಪವಾಗತೊಡಗಿತು. ಅಷ್ಟರಲ್ಲಿ ಕುಂಭಾರಜುವೆ ಬಂದರವು ಬಂದಿತು. ಬಂದರದಲ್ಲಿಳಿಯತಕ್ಕ ಜನರನ್ನು ದಂಡೆಗೆ ಮುಟ್ಟಿಸುವದಕ್ಕಾಗಿ ಅಸಂಖ್ಯ ಹೋ

ಡಿಗಳು ಸಾವುಂದೆ ಸಾಮುಂದೆ ಎಂದು ಬರತೊಡಗಿದವು. ಸ್ಟೀಮಲಾಂಚವು ತನ್ನ ಸ್ಥಳಕ್ಕೆ ನಿಂತಿತು. ಖಂಡೇರಾಯನು ನಿರ್ಮಲೆಯೊಡನೆ ಹೋಡಿಯಲ್ಲಿ ಕುಳಿತು ದಂಡೆಗೆ ಬಂದನು. ಆಗ ನಿರ್ಮಲೆಯು—ಖಂಡೇರಾವ ಈಗ ನಾವು ಎಲ್ಲಿಗೆ ಬಂದೆವು? ಎಂದು ಕೇಳಿದಳು. "ಇದಕ್ಕೆ ಕುಂಭಾರಜುವೆ ಬಂದರವೆನ್ನುವರು. ಇಲ್ಲಿಂದ ವಳವಯಿಯು ಆರು. ಮೈಲು ಆಗುವದು. ಈ ದಾರಿಯನ್ನು ನಾವು ಕಾಲಿನಿಂದ ನಡೆದೇ ಹೋಗಬೇಕಾಗುವದು." ಎಂದು ಖಂಡೇರಾಯನು ಹೇಳಿದನು. ನಿರ್ಮಲೆಯು ಮನದಲ್ಲಿಯೇ ಚಡಪಡಿಸಲಾರಂಭಿಸಿದಳು.

ವಳವಯಿಯು ನಾಲ್ಕಾರು ಮೈಲುಗಳೆಂದರೆ ಬಹಳ ದೂರವಲ್ಲ. ಎರಡು ಮೂರು ತಾಸುಗಳಲ್ಲಿಯೇ ನಾವು ಅಲ್ಲಿಗೆ ಹೋಗಬಹುದು, ಎಂದು ನಿರ್ಮಲೆಯು ಸಮಾಧಾನ ಹಚ್ಚಿಕೊಂಡು ಆ ಖಂಡೇರಾಯನ ಹೆಜ್ಜೆಯ ಮೇಲೆ ಹೆಜ್ಜೆಯನ್ನಿಕ್ಕುತ್ತ ಒತ್ತರಿದಿಂದ ನಡೆದಳು. ಆ ಪ್ರದೇಶವು ಕೇವಲ ಗುಡ್ಡಗಾಡು. ಎದುರಿಗೆ ಭಯಂಕರವಾದ ಗುಡ್ಡಗಳು ದೃಷ್ಟಿಗೆ ಬೀಳುತ್ತಿದ್ದವು. ಅವನ್ನು ನೋಡಿ ನಿರ್ಮಲೆಯು ಅಂಜಿದಳು. ಸುಮಾರು ಒಂದು ಒಂದೂವರೆ ಮೈಲುಗಳ ವರೆಗೆ ಅವರು ದಾರೀ ಕ್ರಮಿಸಿದರು. ಆಗ ಅವರಿಗೆ ಮಾಸೇಲ ಎಂಬ ಹಳ್ಳಿಯು ಹತ್ತಿತು.

ಮಾಸೇಲವು ಸಾಧಾರಣ ಪ್ರತಿಯ ಗ್ರಾಮವು. ಗೋಮಾಂತಕದಲ್ಲಿ ದೇವಸ್ಥಾನಗಳಿಗೆ ಮಹತ್ವ ಬಹಳ; ಗ್ರಾಮವು ಸಣ್ಣದಿರಲಿ, ದೊಡ್ಡದಿರಲಿ, ವಿವಕ್ಷಿತ ದೇವಸ್ಥಾನಗಳು ಇದ್ದೇಇರುತ್ತವೆ. ಈ ದೇವಸ್ಥಾನಗಳಿಂದ ಪೂಜಾರಿ, ಗುರವ, ಭಜಂತ್ರಿಯವರು, ಕಲಾವಂತಿನಿಯರು ಇವರೇ ಮೊದಲಾದವರು ಹೊಟ್ಟೆಯ ತುಂಬಿಕೊಳ್ಳುವರು. ಸೇವೆಗಾಗಿ ಈ ಎಲ್ಲ ಜನರಿಗೆ ಇನಾಮು ಹೊಲಗಳಿರುವವು. ಮಾಸೇಲಗ್ರಾಮದಲ್ಲಿ ೮-೧೦ ದೇವಸ್ಥಾನಗಳಿದ್ದದರಿಂದ ಇಲ್ಲಿಯ ಪೂಜಾರಿಗಳು ಧನಸಂಪನ್ನರಿದ್ದರು. ಗೋಮಾಂತಕವು ಎಲ್ಲ ಬಾಬುಗಳಲ್ಲಿ ಹಿಂದುಳಿದಿದ್ದರೂ ಅತಿಥಿಸೇವೆಯಲ್ಲಿ ಮುಂದರಿದಿರುವದು. ಉಳಿದ ಪ್ರಾಂತದವರು ಇಲ್ಲಿಯವರ ಆದರೋಪಚಾರಗಳನ್ನು ನೋಡಿ ನಾಚಿಕೆಯಿಂದ ತಲೆತಗ್ಗಿಸಬೇಕಾಗುತ್ತದೆ. ಯಾವ ಅತಿಥಿಯು ಬಂದರೂ ಇಲ್ಲಿಯ ಜನರು ಆತನ ಕ್ಷುಧೆ-ತೃಷೆಗಳನ್ನು ನಿವಾರಿಸುವರು. ಇರಲಿ.

ಖಂಡೇರಾಯನು ಗೋಮಾಂತಕದಲ್ಲಿ ನಾಲ್ಕಾರು ವರುಷಗಳಿಂದ ಇರಹತ್ತಿದ್ದನು. ಮೇಲಾಗಿ ಆತನು ವ್ಯಾಪಕ ಸ್ವಭಾವದವನಿದ್ದದರಿಂದ ಎಲ್ಲ ಜನರ

ಪರಿಚಯವೂ ಅವನಿಗಿತ್ತು ಆದ್ದರಿಂದ ಅವನು ನಿರ್ಮಲೆಯೊಡನೆ ಬಾಸೀವು ಗ್ರಾಮದಲ್ಲಿ ಹೋದನು. ಮತ್ತು ಒಬ್ಬ ಪೂಜಾರ ಮನೆಗೆ ಹೋಗಿ ಪೂಜಾರಿಯೊಡನೆ ಏನೋ ಕಿವಿಮಾತುಗಳನ್ನಾಡಿದನು. ಮುಂದೆ ಸ್ವಲ್ಪಹೊತ್ತಿನಲ್ಲಿ ಒಬ್ಬ ಸ್ತ್ರೀಯು ಹೊರಗೆ ಬಂದು ನಿರ್ಮಲೆಯನ್ನು ಒಳಗೆ ಕರಕೊಂಡು ಹೋದಳು. ಖಂಡೇರಾಯನು ಮೈಮೇಲಿನ ಅರಿವೆಗಳನ್ನೆಲ್ಲ ಕಳೆದಿಟ್ಟು ಭಾವಿಗೆ ಸ್ನಾನಕ್ಕಾಗಿ ಹೋದನು. ಅವನು ಸ್ನಾನಮಾಡಿ ಬಂದಬಳಿಕ ಊಟಮಾಡಿ ಪೂಜಾರಿಯೊಡನೆ ಹರಟೆಹೊಡೆಯುತ್ತ ಕುಳಿತುಕೊಂಡನು. ಇತ್ತ ನಿರ್ಮಲೆಯ ಊಟವೂ ಆಯಿತು. ಆ ದಿನ ಸಂಜೆಯವರೆಗೆ ಹ್ಯಾಗಾದರೂ ಹೊತ್ತು ಕಳೆಯಬೇಕೆಂದು ನಿರ್ಧರಿಸಿದ್ದ ಖಂಡೇರಾಯನು ಬೇಗನೆ ಹೊರಡುವ ಸಿದ್ಧತೆಯನ್ನೇ ಮಾಡಲಿಲ್ಲ. ಸಂಜೆಯ ನಾಲ್ಕು ಗಂಟೆಗೆ ಪೋಷಾಕನ್ನು ಹಾಕಿಕೊಂಡು ಪೂಜಾರಿಯ ನಿರೂಪವನ್ನು ತೆಗೆದುಕೊಂಡನು. ಬಳಿಕ ಪೂಜಾರಿಯು ನಿರ್ಮಲೆಗೆ ಹೊರಡುವಂತೆ ಸೂಚಿಸಿದನು. ನಿರ್ಮಲೆಯು ಹೊರಬಿದ್ದು ಖಂಡೇರಾಯನೊಡನೆ ದಾರೀ ಹಿಡಿದಳು.

ಗುಡ್ಡದ ದಾರಿಯು; ಒಮ್ಮೆ ಕಡಿದಾದ ಗುಡ್ಡವನ್ನೇರಬೇಕು; ಮತ್ತೊಮ್ಮೆ ದರಿಯನ್ನು ಇಳಿಯಬೇಕು. ಇಂಥ ದಾರಿಯನ್ನು ನಡೆದು ಅಭ್ಯಾಸವಿಲ್ಲದ್ದರಿಂದ ನಿರ್ಮಲೆಗೆ ಬಹಳ ದಣುವು ಆಯಿತು. ಎರಡು ಮೂರು ಮೈಲು ನಡೆಯುವದರಲ್ಲಿಯೇ ಆಕೆಗೆ ಸಾಕುಸಾಕೆನಿಸಿತು. ಹಣೆಯಮೇಲೆ, ಕೋಮಲ ಕಪೋಲಸ್ಥಳಗಳಮೇಲೆ ಬೆವರಿನ ಹನಿಗಳು ಸ್ಪಷ್ಟವಾಗಿ ಒಡಮೂಡಿದವು. ಆದರೂ ಹೊತ್ತು ಮುಳುಗುವಷ್ಟರಲ್ಲಿ ಮಾವನ ಮನೆಯನ್ನು ಮುಟ್ಟಬೇಕೆಂದು ಆಕೆಯು ಹಾಗಾಯಾಸವನ್ನು ಲಕ್ಷಿಸದೆ ನಡೆದಳು.

ಹೊತ್ತು ಒಂದು ಗಳಿಗೆ ಉಳಿಯಿತು. ಖಂಡೇರಾಯನು ದಕ್ಷಿಣಕ್ಕೆ ಹೊರಳಿ ಅಡ್ಡದಾರಿಯನ್ನು ಹಿಡಿದನು. ನಿರ್ಮಲೆಯು ಗಾಬರಿಯಾಗಿ—ಖಂಡೇರಾವ, ಅಡ್ಡಯಾಕೆ ಹೊರಳಿದಿರಿ? ಎಂದು ಕೇಳಿದಳು. "ಇದು ಒಳದಾರಿಯಿದ್ದು, ಇಲ್ಲಿಂದ ವಳವಯಿಯು ಸಮೀಪದಲ್ಲಿರುವದು" ಎಂದು ಸಮಾಧಾನ ಹೇಳಿ ಖಂಡೇರಾಯನು ಆಕೆಯೊಡನೆ ಭರದಿಂದ ನಡೆದನು. ಅವನು ಒಂದು ಗುಡ್ಡವನ್ನೇರಿ ಹೋದನು. ಆ ಗುಡ್ಡದ ತಲೆಯಮೇಲೆ ಒಂದು ಮನೆಯಿತ್ತು. ಖಂಡೇರಾಯನು ಆ ಮನೆಯ ಅಂಗಳದಲ್ಲಿ ಹೋಗಿ ನಿಂತನು. ನಿರ್ಮಲೆಯು ಗಾಬರಿಯಾಗಿ ಬೆದರಿದ ಚಿಗರಿಯಂತೆ ದೊಡ್ಡ ಕಣ್ಣುಗಳನ್ನು ತೆರೆದು ಸುತ್ತಲೂ

ನೋಡಲಾರಂಭಿಸಿದಳು. ಆಗ ಖಂಡೇರಾಯನು ವಿಕಟಹಾಸ್ಯದಿಂದ—ಸುಂದರೀ ಬೆದರಲಿಕ್ಕೆ ನಿನಗೇನಾಯಿತು? ಹೀಗೇಕೆ ನೋಡುವೆ? ಎಂದು ಕೇಳಿದನು. ಆಗ ನಿರ್ಮಲೆಯು ದುಃಖದಿಂದ—ನನ್ನನ್ನು ಎಲ್ಲಿಗೆ ಕರೆದು ತಂದಿರಿ? ನನ್ನನ್ನು ನನ್ನ ಮಾವನ ಮನೆಗೆ ಮುಟ್ಟಿಸಿ ಪುಣ್ಯಕಟ್ಟಿಕೊಳ್ಳಿರಿ; ಎಂದು ನುಡಿದು ದೈನ್ಯ ದಿಂದ ಬೇಡಿಕೊಂಡಳು. ಆಕೆಯ ಆ ದೈನ್ಯಕ್ಕೆ ಖಂಡೇರಾಯನ ಕಲ್ಲೆದೆಯು ದ್ರವಿಸಬಹುದೇ? ಅವನು ಮತ್ತೆ ವಿಕಟಹಾಸ್ಯಮಾಡಿ—ನಿನ್ನನ್ನು ನಿನ್ನ ಮಾವನ ಮನೆಗೆ ಕಳಿಸುವದಕ್ಕೆ ಇಲ್ಲಿಗೆ ಕರೆತಂದಿರುವೆನೆಂದು ಮಾಡಿರುವೆಯೇನು? ನೀನು ಏನು ಮಾಡಿದರೂ ನನ್ನ ಕೈಯಿಂದ ಪಾರಾಗಲಾರೆ. ನೀನು ಒದರಾಡಿ ಅಡವಿ ಯನ್ನೆಲ್ಲ ಪ್ರತಿಧ್ವನಿಗೊಳಿಸಿದರೂ ಹಕ್ಕಿಪಕ್ಕಿಗಳು ಸಹ ನಿನ್ನ ಕಣ್ಣಿಗೆ ಬೀಳಲಾ ರವು. ಹೊತ್ತು ಮುಳುಗಿದ ಕೂಡಲೆ ವ್ಯಾಘ್ರಾದಿಗಳ ಗುಡುಗು ಮಾತ್ರ ಕೇಳಬರುವದು, ಎಂದನು.

ಖಂಡೇರಾಯನ ಈ ಪೋಸಗಾರಿಕೆಯಿಂದ ನಿರ್ಮಲೆಗೆ ತುಂಬಾ ಸಿಟ್ಟು ಬಂದಿತು; ಅವಳು ಸಿಟ್ಟಿನಿಂದ—ನಿಮ್ಮ ಮನಸ್ಸಿನಲ್ಲಿ ಇರುವದಾದರೂ ಏನು? ಎಂದು ನುಡಿದಳು. ಖಂಡೇರಾಯನು ನಕ್ಕು—ಕೋಮಲಾಂಗೀ, ನನ್ನ ಮನಸ್ಸಿನಲ್ಲಿದ್ದದ್ದನ್ನು ಒಡೆದು ಹೇಳುವ ಕಾರಣವೇನು? ನಿನ್ನನ್ನು ಲೋಂಡಾ ದಲ್ಲಿ ನೋಡಿದ ಕೂಡಲೆ ನನ್ನಲ್ಲಿ ಪ್ರಬಲವಾದ ಕಾಮೇಚ್ಛೆಯುತ್ಪನ್ನವಾಯಿತು. ಈ ಸುಂದರ ತನುಲತೆ, ಈ ದುಂಡಗಿನ ಮುಖ, ಈ ಅಂದವಾದ ನೋಟ, ಈ ಪ್ರೋಲಕಾದ ಬೆಡಗು-ಬಿಯ್ಯಾರಗಳನ್ನು ನೋಡಿ ಯಾವ ತರುಣನ ಎದೆಯು ಬಿಚ್ಚ್ಚಲಿಕ್ಕಿಲ್ಲ? ಸುಂದರೀ, ಮನಸೋಕ್ತವಾಗಿ ನಿನ್ನ ಉಪಭೋಗ ಹೊಂದಬೇ ಕೆಂದು ನನ್ನ ಮನಸ್ಸಿನಲ್ಲಿರುವದು. ನನ್ನ ಇಚ್ಛೆಯು ತೃಪ್ತವಾದ ಕೂಡಲೆ ನಿನ್ನನ್ನು ಬಿಟ್ಟುಬಿಡುವೆನು, ಎಂದು ನಿರ್ಲಜ್ಜತನದಿಂದ ನುಡಿದನು.

ಈ ನೀಚನ ದರ್ಶನವಾದ ಕೂಡಲೆ ಉಂಟಾದ ಅಂಜಿಕೆಯು ನಿರ್ಮಲೆಗೆ ಈಗ ಸತ್ಯವಾಗಿ ತೋರಿತು. ಆಕೆಯು ಪರಮೇಶ್ವರನಿಗೆ ಮೊರೆಯಿಡುತ್ತ ದೊಡ್ಡದನಿಯಿಂದ ಅಳಲಾರಂಭಿಸಿದಳು. ಹೀಗೆ ಅತ್ತರೆ ಖಂಡೇರಾಯನು ಕೇಳುವನೇ? ಆಕೆಯನ್ನು ದರದರ ಎಳೆಯುತ್ತ ಮನೆಯೊಳಗೆ ಕರೆದುಕೊಂಡು ಹೋದನು.

ಖಂಡೇರಾಯನ ಮನೆಯೆಂದರೆ, ಅದೊಂದು ಭಯಂಕರವಾದ ಶ್ವಾಪ ದದ ಗವಿಯಂತಿತ್ತು. ಅದರಲ್ಲಿ ಎರಡು ಮೂರು ಕೋಣೆಗಳಿದ್ದವು. ನುನೆ

ಯಲ್ಲಿ ಹೆಂಗಸರಾಗಲಿ, ಹುಡಗರಾಗಲಿ, ಬೇರೆ ಆಳುಹೋಳುಗಳಾಗಲಿ ಯಾರೂ ಇರಲಿಲ್ಲ. ನಿರ್ಮಲೆಯನ್ನು ಒಂದು ಕೋಣೆಯಲ್ಲಿ ಹಾಕಿ ಬಾಗಿಲಿಕ್ಕಿ ಖಂಡೇರಾಯನು ಅಡಿಗೆ ಮಾಡಿಕೊಂಡು ಸಂಜೆಯ ಊಟವನ್ನು ಮಾಡಿದನು. ಬಳಿಕ ಅವನು ನಿರ್ಮಲೆಯ ಬಳಿಗೆ ಬಂದು ಆಕೆಯು ತನಗೆ ಅನುಕೂಲಳಾಗುವಂತೆ ಬೋಧಿಸತೊಡಗಿದನು. ಉಪದೇಶಕ್ಕೆ ಆಕೆಯು ಹಾದಿಗೆ ಬರದ್ದರಿಂದ ಬೆದರಿಕೆ ಹಾಕಿದನು; ಗದ್ದರಿಸಿದನು. ಏನಾದರೂ ಆಕೆಯು ಆತನ ದುಷ್ಟವಾಸನೆಯನ್ನು ತೃಪ್ತಿಗೊಳಿಸಲು ಒಪ್ಪಲಿಲ್ಲ. ತನ್ನ ಶಕ್ತಿಯನ್ನುಪಯೋಗಿಸಿ ಕಾಮೇಚ್ಛೆಯನ್ನು ತೃಪ್ತಿಪಡಿಸಿಕೊಳ್ಳಬೇಕೆಂಬ ವಿಚಾರವು ಆತನಲ್ಲಿ ಬಂದಿತು. ಆದರೆ ಈ ಸುರಸವಾದ ವೈನಾಕ ಪಕ್ಷಿಯು ನನ್ನ ಜಾಳಿಗೆಯಲ್ಲಿ ಸಿಕ್ಕಿರಲು ಇಷ್ಟೇಕೆ ಅವಸರ ಮಾಡಬೇಕು, ಪ್ರೇಮದಿಂದಾಗುವ ಸೌಖ್ಯವು ಒಲುಮೆಯಲ್ಲಿ ಉಂಟಾಗಲಾರದು. ಆದ್ದರಿಂದ ಈ ದಿನ ಬೆಳಗಾಗುವವರೆಗೆ ಈಕೆಯನ್ನು ಕತ್ತಲೆಯ ಕೋಣೆಯಲ್ಲಿ ಚಲ್ಲಿದರೆ ನಾಳಿಗೆ ಇವಳು ತಾನೇ ಹಾದಿಗೆ ಬರುವಳು ಎಂದು ಯೋಚಿಸಿ, ಆಕೆಯನ್ನು ದರದರ ಎಳೆಯುತ್ತ ಒಂದು ಕಗ್ಗತ್ತಲು ಮುಸುಕಿದ ಕೋಣೆಯಲ್ಲಿ ಚಲ್ಲಿ, ಬಾಗಿಲಹಾಕಿ ಚಿಲಕಹಾಕಿಕೊಂಡನು. ಬಳಿಕ ಅವನು ಹಾಸಿಗೆಯ ಮೇಲೆ ಮಲಗಿ ಗೊರಕೆ ಹೊಡೆಯಲಾರಂಭಿಸಿದನು.

ಇತ್ತ ಆ ಕತ್ತಲಕೋಣೆಯಲ್ಲಿ ನಿರ್ಮಲೆಯು ತನ್ನ ಭವಿತವ್ಯತೆಗಾಗಿ ಶೋಕಿಸುತ್ತ ಬಿದ್ದುಕೊಂಡಿದ್ದಳು. ಮಧ್ಯರಾತ್ರಿಯ ಸಮಯಕ್ಕೆ ಇಲ್ಲಿಂದ ಹ್ಯಾಗಾದರೂ ಮಾಡಿ ಓಡಿಹೋಗಬೇಕೆಂಬ ವಿಚಾರವು ಆಕೆಯ ಮನಸ್ಸಿನಲ್ಲಿ ಬಂದಿತು. ಕೂಡಲೆ ಅವಳು ಅಳುವದನ್ನು ಬಿಟ್ಟು ಪರಮೇಶ್ವರನ ಧ್ಯಾನ ಮಾಡಿ ಆ ಕೋಣೆಯ ಗೋಡೆಗಳನ್ನು ಕೈಯಾಡಿಸಿ ನೋಡತೊಡಗಿದಳು. ಹೀಗೆ ಆಕೆಯು ಕೈಯಾಡಿಸುತ್ತಿರಲು, ಒಂದು ಕಿಡಕಿಯು ಹತ್ತಿತು. ನಿರ್ಮಲೆಯು ಸಮಾಧಾನವತಾಳಿ ಆ ಕಿಡಕಿಯ ಬಾಗಿಲವನ್ನು ತೆರೆದಳು. ಕರ್ಮ-ಧರ್ಮ ಸಂಯೋಗದಿಂದ ಕಿಡಕಿಗೆ ಗಜಗಳಿರಲಿಲ್ಲ. ಮಸಮಸಕಾದ ಕತ್ತಲಿಯಲ್ಲಿ ಹೊರಗಿನ ಭಯಾನಕ ಸ್ವರೂಪವು ಆಕೆಯ ಕಣ್ಣಿಗೆ ಬಿದ್ದಿತು. ಈ ನೀಚನ ಕೈಯಲ್ಲಿ ಸಿಕ್ಕು ಮಾನವನ್ನು ಕಳೆದುಕೊಳ್ಳುವದಕ್ಕಿಂತ ಅಡವಿಯಲ್ಲಿ ಹುಲಿ-ಕರಡಿಗಳ ಪಾಲಾಗುವದು ಲೇಸೆಂದು ಆಕೆಗೆ ತೋರಿತು. ಬಳಿಕ ಅವಳು ಕಿಡಕಿಯಲ್ಲಿ ಬೊಗ್ಗಿ ನೋಡಿದಳು. ಒಂದು ಆಳಿನ ಕೆಳಗೆ ನೆಲವಿರುವದೆಂಬದು ಗೊತ್ತಾಯಿತು. ಕೂಡಲೆ ಟೊಂಕಕ್ಕೆ ಸೆರಗನ್ನು ಸುತ್ತಿ ಕಿಡಕಿಯಿಂದ ಕೆಳಕ್ಕೆ

ಹಾರಿಕೊಂಡಳು. ಅಲ್ಲಿ ಬಳ್ಳಿ ಮೊದಲಾದವುಗಳು ಬೆಳೆದದ್ದರಿಂದ ನಿರ್ಮಲೆಗೆ ಪೆಟ್ಟುಹತ್ತಲಿಲ್ಲ. ಆಕೆಯು ಸಾವರಿಸಿಕೊಂಡೆದ್ದು, ಗುಡ್ಡವನ್ನಿಳಿದು ಆ ಕತ್ತಲೆಯಲ್ಲಿ ಓಡಲಾರಂಭಿಸಿದಳು. ಕಲ್ಲುಗಳು ಬಡೆದು ಆಕೆಯ ಬೆರಳುಗಳು ಒಡೆದು ರಕ್ತವು ಸುರಿಯಲಾರಂಭಿಸಿತು. ಮುಳ್ಳುಕಂಟಿಗಳಿಗೆ ಸಿಕ್ಕು ಆಕೆಯ ಸೀರೆಯು ಹರಿದದ್ದಲ್ಲದೆ ಅಲ್ಲಲ್ಲಿ ಮೈಯೂ ರಕ್ತಮಂಜಗಟ್ಟಿತು. ಶ್ವಾಪದಗಳಂತೂ ದೂರದಲ್ಲಿ ಗುಡುಗು ಹಾಕುತ್ತಿದ್ದವು. ಈ ಯಾವ ಕಡೆಗೂ ನಿರ್ಮಲೆಯ ಲಕ್ಷವು ಹೋಗಲಿಲ್ಲ. ಪುನಃ ಆ ದುಷ್ಟನ ಕೈಗೆ ಸಿಗದಂತೆ ಪಾರಾಗಿ ಹೋಗಬೇಕೆಂಬದೇ ಆಕೆಯ ಇಚ್ಛೆಯಾಗಿತ್ತು. ಅದರಲ್ಲಿಯೇ ಅವಳು ಗುಂಗಾಗಿದ್ದಳು. ಅಂಥ ಕಗ್ಗತ್ತಲೆಯಲ್ಲಿ ಅವಳು ಭಯಂಕರ ಚಿಂತೆಯಿಂದ ವ್ಯಾಪ್ತಳಾಗಿ ಕಾಲುಗಳು ಒಯ್ದತ್ತ ನಡೆದಿರಲು ಆ ನೀಚ ಖಂಡೇರಾಯನ ಮನೆಯಿಂದ ಎರಡು ಮೈಲುಗಳ ಅಂತರವನ್ನು ಕ್ರಮಿಸಿದಳು. ಅಷ್ಟರಲ್ಲಿ ಆಕೆಯು ಒಮ್ಮಿಂದೊಮ್ಮೆ ಮೂರ್ಛೆಬಂದು ಭೂಮಿಯಮೇಲೆ ಒರಗಿಬಿಟ್ಟಳು. ವಿಧಿಗತಿಯು ವಿಚಿತ್ರವಾದದ್ದು.

## (೪) ನಾರಾಯಣರಾವ ಜಹಾಗೀರದಾರ.

ನಿರ್ಮಲೆಯು ಮೂರ್ಛಾಗತಳಾಗಿ ಬಿದ್ದ ಸ್ಥಳವು ಕಟ್ಟಡವಿಯಾಗಿದ್ದರೂ ಫೋಂಡ್ಯಾ, ನಾಗೇಶ, ಕಬಳೆ ಮುಂತಾದ ಗ್ರಾಮುಗಳಿಗೆ ಹೋಗುವ ಮಾರ್ಗವಾಗಿತ್ತು; ಹಾಗು ಫೋಂಡ್ಯಾದಿಂದ ಮಾಣಸಾತರಿ ಗ್ರಾಮಕ್ಕೆ ಹೋಗುವ ಮೋಟಾರು ಈ ಮಾರ್ಗದಿಂದಲೇ ಹೋಗುತ್ತಿತ್ತು.

ಜಹಾಗೀರದಾರ ನಾರಾಯಣರಾಯನು ಮುಂಬೈ ಹಾಯಕೋರ್ಟಿನಲ್ಲಿ ವಕೀಲನಿದ್ದನು. ಆತನು ಕಾರ್ಯಾಂತರದಿಂದ ಈಗ ಗೋಮಾಂತಕಕ್ಕೆ ಬಂದಿದ್ದನು. ನಾರಾಯಣರಾಯನು ಫೋಂಡ್ಯಾದಲ್ಲಿ ವಸತಿಯನ್ನು ಮಾಡಿದ್ದನು. ಕೆಲವೊಂದು ಕಾರ್ಯನಿಮಿತ್ತವಾಗಿ ಆತನು ಆ ದಿನ ರಾತ್ರಿಯಲ್ಲಿ ಮಾಣಸಾತರೀ ಗ್ರಾಮಕ್ಕೆ ಹೋಗಿದ್ದನು. ಅಲ್ಲಿಯ ಕೆಲಸ ತೀರಿಸಿಕೊಂಡು ದೊಡ್ಡ ನಸುಕಿನಲ್ಲಿ ಅವನು ಮೋಟಾರಿನಲ್ಲಿ ಕುಳಿತು ಫೋಂಡ್ಯಾಗ್ರಾಮಕ್ಕೆ ಹೊರಟಿದ್ದನು. ಮೋಟಾರ ಬಂಡಿಯು ವಾಯುವೇಗದಿಂದ ಸಾಗಿತ್ತು. ಮಾಣಸಾತರಿಯಿಂದ ಕೆಲ

ದಾರೀ ಬಂದಬಳಿಕ ದಾರಿಗೆ ಹೊಂದಿರುವ ಹುಲ್ಲುಗಟ್ಟೆಯಲ್ಲಿ ಓರ್ವ ಸ್ತ್ರೀಯು ಅಸ್ವಸ್ಥಳಾಗಿ ಬಿದ್ದಿರುವಳೆಂಬದು ನಾರಾಯಣರಾಯನಿಗೆ ಕಂಡು ಬಂದಿತು. ಕೂಡಲೆ ಅವನು ಡ್ರಾಯವ್ಹರನಿಗೆ ಮೋಟಾರ ನಿಲ್ಲಿಸಹೇಳಿದನು. ಮೋಟಾರ ಬಂಡಿಯು ನಿಂತಿತು. ನಾರಾಯಣರಾಯನು ಆ ಸ್ತ್ರೀಯ ಬಳಿಗೆ ಬಂದು ನೋಡಿದನು. ಕೋಮಲ ದೇಹದ ಓರ್ವ ತರುಣಿಯು ನಿಶ್ಚೇಷ್ಟಿತಳಾಗಿ ಬಿದ್ದಿದ್ದಳು. ಆಕೆಗೆ ಶ್ವಾಪದಗಳಿಂದಾಗಲಿ, ಮನುಷ್ಯರಿಂದಾಗಲಿ ಗಾಯಗಳಾಗಿರಲಿಲ್ಲ. ಕೂಡಲೆ ನಾರಾಯಣರಾಯನು ಆಕೆಯನ್ನು ಇದ್ದಕ್ಕಿದ್ದ ಹಾಗೆ ಎತ್ತಿ ಮೋಟಾರಿನಲ್ಲಿ ಮಲಗಿಸಿದನು. ಹಾಗು ಆದಷ್ಟು ವೇಗದಿಂದ ಮೋಟಾರನ್ನು ಹೊಡೆಯಲು ಡ್ರಾಯವ್ಹರನಿಗೆ ಹೇಳಿದನು.

ಆ ಸ್ಥಳದಿಂದ ಘೋಂಡ್ಯಾ ಗ್ರಾಮವು ಬಹಳ ದೂರದಲ್ಲಿರಲಿಲ್ಲ. ಆರೇಳು ಮೈಲುಗಳ ಅಂತರದಲ್ಲಿತ್ತು. ಮೋಟಾರವು ವಾಯುವೇಗವನ್ನು ಅನುಸರಿಸಿ ಸಾಗಿ ಆರೇಳು ಮಿನಿಟುಗಳಲ್ಲಿ ನಾರಾಯಣರಾಯನ ಬೀಡಾರಕ್ಕೆ ಹೋಯಿತು. ನಾರಾಯಣರಾಯನು ಮೋಟಾರದಿಂದಿಳಿದು ಡ್ರಾಯವ್ಹರನ ಸಹಾಯದಿಂದ ನಿರ್ಮಲೆಯನ್ನು ಒಂದು ಕೋಣೆಯಲ್ಲಿ ಮಲಗಿಸಿದನು. ಮತ್ತು ಡಾಕ್ಟರನಿಗೆ ಒಂದು ಚೀಟಿಯನ್ನು ಬರೆದು ಆ ಡ್ರಾಯವ್ಹರನ ಕೈಯಲ್ಲಿ ಕೊಟ್ಟನು. ಡ್ರಾಯವ್ಹರನು ಅಲ್ಪಾವಕಾಶದಲ್ಲಿ ಡಾಕ್ಟರನನ್ನು ಕರಕೊಂಡು ಬಂದನು.

ಡಾಕ್ಟರನು ನಿರ್ಮಲೆಯನ್ನು ಚನ್ನಾಗಿ ಮಲಗಿಸಿ ಆಕೆಯ ಪ್ರಕೃತಿಯನ್ನು ನೋಡಿದನು. ಆಕೆಗೆ ಇನ್ನು ಸ್ಮೃತಿ ಬಂದಿರಲಿಲ್ಲ. ಒಂದು ತಂಬಿಗೆಯಲ್ಲಿ ನೀರು ತರಿಸಿ ಅದರಲ್ಲಿ ಔಷಧಿಯನ್ನು ಹಾಕಿ ಆ ನೀರಿನಲ್ಲಿ ಕರವಸ್ತ್ರವನ್ನು ಎದ್ದಿ ಹಿಂಡಿ ಮಡಿಕೆಮಾಡಿ ಆಕೆಯ ಮೆಲಕುಗಳಮೇಲೆ ಇಟ್ಟನು. ಆಗ ನಾರಾಯಣರಾಯನು—

"ಡಾಕ್ಟರರೇ, ಪ್ರಕೃತಿಯು ಹ್ಯಾಗಿರುವದು? ಈ ತರುಣಿಯು ಬದುಕಬಹುದೆ?"

"ನಾರಾಯಣರಾವ, ಈಕೆಗೆ ಮನಸ್ಸಿನಮೇಲೆ ಯಾವದೋ ಒಂದು ಸಂಗತಿಯ ವಿಷಯವಾಗಿ ಭಯಂಕರ ಪರಿಣಾಮವಾಗಿದೆ. ಆದ್ದರಿಂದ ಈಕೆಯ ಮಿದುಳಿನಲ್ಲಿ ವಿಕಾರವಾಗಿದೆ; ಆದರೆ ಬದುಕುವ ಆಶೆಯಿದೆ."

"ಈಕೆಯು ಶುದ್ಧಿಯಮೇಲೆ ಬರಲು ಎಷ್ಟು ದಿವಸಗಳುಬೇಕು?"

"ಅದರ ನಿಶ್ಚಿತವನ್ನು ಹೇಳಲಿಕ್ಕೆ ಬರುವದಿಲ್ಲ. ಈ ರೋಗಕ್ಕೆ ವಿಶ್ರಾಂ

ತಿಯೇ ಮುಖ್ಯ ಔಷಧವು. ಮಿದುಳಿಗೆ ವಿಶೇಷ ವಿಕಾರವಾಗಿದ್ದರೆ ಎಂಟೆಂಟು ದಿನಗಳಾದರೂ ರೋಗಿಯು ಶುದ್ಧಿಯಮೇಲೆ ಬರುವದಿಲ್ಲ.''

"ಪಾಪ! ಚಿಕ್ಕ ಹೆಣ್ಣು ಮಗಳು ಎಂಥ ವಿಪತ್ತಿಗೆ ಗುರಿಯಾಗಿರುವಳಲ್ಲ''

"ನಾರಾಯಣರಾವ, ಈಕೆಯು ನಿಮಗೇನಾಗಬೇಕು?''

"ಡಾಕ್ಟರರೇ, ಈ ತರುಣಿಯು ನನಗೇನೂ ಸಂಬಂಧವಿಲ್ಲ; ಬೆಳಿಗ್ಗೆ ಮಾಣಸಾತರಿಯಿಂದ ಬರುವಾಗ್ಗೆ ದಾರಿಯಲ್ಲಿ ನಿಶ್ಚೇಷ್ಟಿತಳಾಗಿ ಬಿದ್ದಿದ್ದಳು. ಆದ್ದರಿಂದ ಈಕೆಯನ್ನು ಮೋಟಾರಿನಲ್ಲಿ ಹಾಕಿಕೊಂಡು ಇಲ್ಲಿಗೆ ತಂದು ನಿಮ್ಮ ಕಡೆಯಿಂದ ಚಿಕಿತ್ಸೆ ನಡಿಸಿರುವೆನು. ಈಕೆಯು ಯಾರೋ ನನಗೆ ಗೊತ್ತಿಲ್ಲ.''

ನಾರಾಯಣರಾಯನ ಪರೋಪಕಾರ ಬುದ್ಧಿಗೆ ಡಾಕ್ಟರನು ಸಂತೋಷ ಬಟ್ಟು ಆಕೆಯ ಸುಶ್ರೂಷಣೆಗೆ ನರ್ಸಳನ್ನು ಕಳಿಸಿದನು. ನರ್ಸಳು ಬಂದು ನಿರ್ಮಲೆಯ ಉಪಚಾರವನ್ನು ನಡಿಸಿದಳು.

ಪ್ರಿಯವಾಚಕರೇ, ಇತ್ತ ಖಂಡೇರಾಯನು ನಸುಕಿನಲ್ಲೆದ್ದು, ಈಗ ನಿರ್ಮಲೆಗೆ ಪಶ್ಚಾತ್ತಾಪವಾಗಿರಬಹುದು. ಬೆಳತನಕ ಆಕೆಯು ಕತ್ತಲೆಯ ಕೋಣೆಯಲ್ಲಿ ಇದ್ದದರಿಂದ ಅಂಜಿಕೊಂಡಿರಬಹುದು. ನಾನು ಬಾಗಿಲು ತೆಗೆಯುತ್ತಲೆ ಆಕೆಯು ನನ್ನ ಕಾಲಿಗೆ ಬೀಳುವಳು ಎಂದು ಮುಂತಾದ ಕಲ್ಪನೆಗಳನ್ನು ತಾಳಿ ಕೋಣೆಯ ಬಾಗಿಲ ತೆರೆದನು. ಬಾಗಿಲ ತೆರೆದ ಕೂಡಲೆ ಆತನ ಎದೆಗೆ ಗುಂಡುಬಡಿದಹಾಗಾಯಿತು. ಹಾ! ಎಂದು ಉಚ್ಚರಿಸಿ ಕಲ್ಲಿನ ಗೊಂಬೆಯಂತೆ ಕ್ಷಣಹೊತ್ತು ನಿಂತುಬಿಟ್ಟನು. ಕಿಡಕಿಯ ಬಾಗಿಲವು ತೆರೆದದ್ದರಿಂದ ನಿರ್ಮಲೆಯು ಓಡಿಹೋಗಿರುವಳೆಂಬದು ಆತನಿಗೆ ಹೊಳೆಯಿತು. ತಾನು ರಾತ್ರಿಯಲ್ಲಿಯೇ ಯಾಕೆ ಇಚ್ಛೆಯನ್ನು ಪೂರ್ಣಪಡಿಸಿಕೊಳ್ಳಲಿಲ್ಲವೋ ಎಂದು ಪಶ್ಚಾತ್ತಾಪಪಟ್ಟು ತನ್ನ ದಡ್ಡತನಕ್ಕೆ ಹಳಿದುಕೊಂಡನು. ಬಳಿಕ ಅವನು ತನ್ನ ಕೋಣೆಗೆ ಬಂದು—ನಿರ್ಮಲೆಯು ಎಲ್ಲಿಗೆ ಹೋಗಿರಬಹುದು? ಆಕೆಯು ಎತ್ತ ಹೋದಳೆಂಬದು ಹೆಜ್ಜೆಯ ಗುರುತು ಸಹ ಸಿಗುವಂತಿಲ್ಲ. ಬಹಳಮಾಡಿ ಆಕೆಯು ಅರಣ್ಯದಲ್ಲಿ ಹುಲಿಯ ಭಕ್ಷ್ಯಸ್ಥಾನದಲ್ಲಿ ಬಿದ್ದಿರಬೇಕು; ಇಲ್ಲವೆ ಯಾವದೊಂದು ದರಿಯನ್ನು ಇಳಿಯುವಾಗ ಕಂದರದಲ್ಲಿ ಬಿದ್ದು ಪ್ರಾಣಬಿಟ್ಟಿರಬೇಕು; ಹಾಯ್! ಹಾಯ್ ನನ್ನ ಸಮಾನ ಮೂರ್ಖರಿಲ್ಲ; ಇಂಥ ಸುಂದರಪಕ್ಷಿಯು ಕೈಗೆ ಸಿಕ್ಕಿದ್ದರೂ ಒಮ್ಮೆಯಾದರೂ ಚುಂಬಿಸದೆ ಹೋದೆನು ಎಂಬದಾಗಿ ಬಹಳ ಹೊತ್ತಿನವರೆಗೆ ಚಡಪಡಿಸಿ ಕೊನೆಗೆ ಯಾವದೋ ಒಂದು ಸಂಗತಿಯನ್ನು

ಧ್ಯಾನದಲ್ಲಿ ತಂದು ಚಟ್ಟನೆ ಎದ್ದನು. ಬಳಿಕ ಅವನು ಹೊಸ ಪೋಷಾಕನ್ನು ಧರಿಸಿ ಆ ಮಂದಿರದೊಳಗಿನ ಒಂದು ಮೂಲೆಯಲ್ಲಿ ನೆಲಕೆದರಿ ಒಂದು ಹ್ಯಾಂಡ್‌ಬ್ಯಾಗ ಹೊರಗೆ ತೆಗೆದು ಅದರಲ್ಲಿ ಅವನು ತನಗೆ ಬೇಕಾಗುವಷ್ಟು ನೋಟುಗಳನ್ನು ತಕ್ಕೊಂಡು ಪುನಃ ಆ ಹ್ಯಾಂಡ್‌ಬ್ಯಾಗನ್ನು ಆ ಸ್ಥಳದಲ್ಲಿರಿಸಿ ಮೊದಲಿನಂತೆ ನೆಲಸಮಮಾಡಿ ಬಾಗಿಲ ಹಾಕಿಕೊಂಡು ನಡೆದನು.

---

## (೫) ಖಂಡೇರಾಯನು.

ಖಂಡೇರಾಯನು ದುರ್ಜನರಲ್ಲಿ ದುರ್ಜನನಾಗಿದ್ದನು. ಅವನು ಜನ್ಮದಾರಭ್ಯ ಏನಾದರೊಂದು ಕಪಟಜಾಲವನ್ನು ಹೂಡಿ ಮಂದಿಯನ್ನು ಮೋಸಗೊಳಿಸುವ ವ್ಯವಸಾಯವನ್ನೇ ಮಾಡುತ್ತ ಬಂದಿದ್ದನು. ಬಿನ್ನಭಾಂಡವಲಿನ ಈ ಧಂದೆಯಿಂದ ಅವನು ಕೈಯಲ್ಲಿ ಎಂಟು ಹತ್ತು ಸಾವಿರ ರೂಪಾಯಿಗಳನ್ನು ಮಾಡಿಕೊಂಡಿದ್ದನು. ಆ ದುರ್ಜನನು ಹೀಗೆಯೇ ಸ್ವಚ್ಛಂದವೃತ್ತಿಯಿಂದ ಕಾಲಕಳೆಯುತ್ತಿದ್ದನು. ಆತನ ಸವಿಮಾತುಗಳಿಗೆ ಎಂಥ ಜಾಣಮನುಷ್ಯನಾದರೂ ಮರುಳಾಗುತ್ತಿದ್ದನು. ಬಹಳ ಹೇಳುವದೇನು ಅವನ ಮಾತು ಕೇಳಿ ಮೋಸಹೋಗಿ ಹಾನಿಗೆ ಗುರಿಯಾದವರು ಕೂಡಾ ಪುನಃ ಆತನ ಮಾತಿನ ಮೇಲೆ ವಿಶ್ವಾಸವನ್ನಿಡುತ್ತಿದ್ದರು. ಕೆಲ ಕೆಲ ಜನರಲ್ಲಿ ಮಂದಿಯನ್ನು ಮರುಳು ಮಾಡುವ ವಿಲಕ್ಷಣ ಶಕ್ತಿಯಿರುತ್ತದೆ. ಆ ಶಕ್ತಿಯ ಉಪಯೋಗವನ್ನು ಅವರು ಉತ್ತಮ ಕಾರ್ಯದಲ್ಲಿ ಉಪಯೋಗಿಸಿದರೆ ಅವರಿಂದ ಮಹತ್ತರ ಕೆಲಸವಾಗುವದು. ಆದರೆ ದುಷ್ಟ ಕಾರ್ಯದಲ್ಲಿ ಉಪಯೋಗಿಸಿದರೆ ಅನೇಕ ಜನರು ಜನ್ಮವಿರುವವರೆಗೆ ಗೋಳಾಡುವರು. ಇಂಥ ದುಷ್ಟರಲ್ಲಿ ಖಂಡೇರಾಯನು ಶಿರೋಮಣಿಯಾಗಿದ್ದನು. ಅವನ ವಾಣಿಯಲ್ಲಿ ಮಾಧುರ್ಯವಿತ್ತು. ಅವನ ಸವಿಮಾತುಗಳಿಗೆ ಜನರು ಮರುಳಾಗುತ್ತಿದ್ದರು. ಆದರೆ ಆತನು ಆ ಶಕ್ತಿಯನ್ನು ದುಷ್ಟಕೆಲಸಕ್ಕೆ ಉಪಯೋಗಿಸ ಹತ್ತಿದ್ದರಿಂದ ವಿಷಕುಂಭದಂತೆ ಆತನು ತಾಜ್ಯನಾಗಿದ್ದನು.

ನಿರ್ಮಲೆಯು ಕೈಗೆ ಸಿಕ್ಕೂ ಸಿಗದಂತಾದ್ದರಿಂದ ಆಕೆಯ ಶೋಧ ಹಚ್ಚ

ಬೇಕು ಹಾಗು ಸಾಧಿಸಿದರೆ ರಾಮುಭಾವೂನ ಆಸ್ತಿಯನ್ನು ಎತ್ತಿ ಹಾಕಬೇಕು. ಎಂದು ಯೋಚಿಸಿ ಮನೆಬಿಟ್ಟು ಹೊರಟ ಆತನು ನೆಟ್ಟಗೆ ವಳವಯಿಗೆ ಹೋದನು. ಆಗ ಆತನು ದೊಡ್ಡ ಮನುಷ್ಯನಂತೆ ಬೆಲೆಯುಳ್ಳ ಪೋಷಾಕನ್ನು ದರಿಸಿದ್ದನು. ಅವನು ವಳವಯೀಗೆ ಹೋಗಿ ರಾಮುಭಾವೂನ ವಿಷಯವಾಗಿ ಆ ಊರಲ್ಲಿ ಮಾಹೀತಿಯನ್ನು ತಕ್ಕೊಂಡನು. ರಾಮುಭಾವುವು ಮೊದಲು ಸಾಮಾನ್ಯ ಪ್ರತಿಯ ಮನುಷ್ಯನಿದ್ದು, ಕಟ್ಟಿಗೆಯ ವ್ಯವಹಾರದಿಂದ ಹತ್ತಿಪ್ಪತ್ತುಸಹಸ್ರ ರೂಪಾಯಿಗಳನ್ನು ಸಂಪಾದಿಸಿ ಈಗ ಹೊಲ-ಮನೆ ಹಿಡಿದುಕೊಂಡು ಉತ್ತಮ ಸ್ಥಿತಿಯಲ್ಲಿರುವನೆಂದೂ ಈಗ ಒಂದು ತಿಂಗಳ ಹಿಂದೆ ಅವನ ಹೆಂಡತಿ ಸತ್ತು ಅವನಿಗೆ ವಿಲಕ್ಷಣ ದುಃಖವಾಗಿದೆಯೆಂದೂ ಗೊತ್ತಾಯಿತು.

ಖಂಡೇರಾಯನು ರಾಮುಭಾವೂನ ಮನೆಗೆ ಹೋದನು. ಆಗ ರಾಮುಭಾವು ಒಂದು ಕಟ್ಟೆಯ ಮೇಲೆ ದಿಂಬಿಗೆ ಆತು ಕುಳಿತುಕೊಂಡಿದ್ದನು. ಯಾವನೋ ಒಬ್ಬ ದೊಡ್ಡ ಮನುಷ್ಯನು ಬಂದನೆಂದು ಅವನು ಖಂಡೇರಾಯನ ಸ್ವಾಗತ ಮಾಡಿದನು. ಖಂಡೇರಾಯನು ಕೇವಲ ಗುರ್ತಿನ ಜನರು ಮಾತಾಡಿಸುವಂತೆ ಮಾತಾಡಿಸುತ್ತ ಒಳಗೆ ಹೋಗಿ ಕುಳಿತು ತಾನು ಕಟ್ಟಿಗೆ ಖರೀದಿಗಾಗಿ ನಿಮ್ಮ ಕಡೆಗೆ ಬಂದಿರುವೆನು ಎಷ್ಟು ಸಾವಿರ ರೂಪಾಯಿಗಳ ಕಟ್ಟಿಗೆ ನಿಮ್ಮಲ್ಲಿ ಸಿಗುವದು ಎಂದು ಕೇಳಿದನು. ಆಗ ರಾಮುಭಾವು ನರಳುತ್ತ—ರಾಯರೇ, ನಾನು ಈಗ ಕಟ್ಟಿಗೆಯ ವ್ಯಾಪಾರವನ್ನು ಬಿಟ್ಟು ಬಿಟ್ಟಿದ್ದೇನೆ ನಿಮಗೆ ಬೇಕಾದರೆ ನಾನು ಸಂಭಾವಿತ ವ್ಯಾಪಾರಿಗಳ ಗುರ್ತು ಮಾಡಿ ಕೊಡುತ್ತೇನೆ.

ಬಳಿಕ ಖಂಡೇರಾಯನು ಆ ಮಾತು ಈ ಮಾತು ಆಡುತ್ತ ಕುಳಿತನು. ರಾಮುಭಾವು ಅಶಕ್ತನಾಗಿದ್ದು, ಆತನು ಬೇನೆಯಿಂದ ಒಳಲುತ್ತಿರುವನೆಂಬದು ಅವನಿಗೆ ಕಂಡು ಬಂದಿತು. ಆಗ ಆತನು ರಾಮುಭಾವುಜೋಯಿಸರೇ, ಯಾಕೆ ನರಳುವಿರಿ? ಮೈಯಲ್ಲಿ ಸ್ವಸ್ಥವಿಲ್ಲವೇನು? ಮನೆಯಲ್ಲಿ ಯಾರೂ ಇದ್ದಂತೆ ಕಾಣುವದಿಲ್ಲವಲ್ಲ? ಎಂದನು.

"ಹೌದು ರಾಯರೇ, ಮನೆಯಲ್ಲಿ ಯಾರು ಇರಬೇಕು? ಹೆಂಡತಿಯು ಸತ್ತು ಒಂದು ತಿಂಗಳಾಯಿತು. ಸಂತತಿಯಂತೂ ಇಲ್ಲವೇ ಇಲ್ಲ. ನಾನೊಬ್ಬನು ಬೇನೆಯಿಂದ ಬಳಲುತ್ತಿದ್ದೇನೆ" ಎಂದು ರಾಮುಭಾವು ನುಡಿದನು.

"ಜೋಯಿಸರೇ, ನಿಮ್ಮ ಸ್ಥಿತಿಯನ್ನು ನೋಡಿ ನನಗೆ ಬಹಳ ವಿಷಾದವಾ

ಗುತ್ತದೆ. ನಿಮಗೆ ಬೇರೆ ಆಪ್ತರಾರೂ ಇಲ್ಲವೇನು? ಪಾಪ! ಎಷ್ಟು ಕಷ್ಟ ಪಡುವಿರಲ್ಲ?''

"ನನಗೆ ಆಪ್ತರಾರೂ ಇಲ್ಲ. ಒಬ್ಬ ಸೋದರಸೊಸೆ ಮಾತ್ರ ಇರುವಳು. ಆಕೆಯು ಇರುವದು ಮುಂಬೈಯಲ್ಲಿ; ಬರಲಿಕ್ಕೆ ಪತ್ರಬರೆದಿದ್ದೇನೆ ಎಂದು ಬರುವಳೋ ನೋಡಬೇಕು!''

"ಮುಂಬೈ ಬಿಟ್ಟು ನಿಮ್ಮ ಸೊಸೆ ಇಲ್ಲಿಗೆ ಬರಬಹುದೇ? ಮುಂಬೈಯಲ್ಲಿ ದ್ದಷ್ಟು ಸೌಖ್ಯವು ಈ ಕೊಂಪೆಯಲ್ಲಿ ಆಕೆಗೆ ಆಗುವ ಸಂಭವವಿಲ್ಲ. ಒಂದು ವೇಳೆ ಬಂದರೂ ಇಲ್ಲಿ ಆಕೆಗೆ ಸೊಗನೆನಿಸಲಿಕ್ಕಿಲ್ಲ? ಜೋಯಿಸರೇ ಇನ್ನೊಂದು ಸಂಗತಿಯು ನಿಮ್ಮ ಲಕ್ಷದಲ್ಲಿ ಬಂದಿರಲಿಕ್ಕಿಲ್ಲ! ಮುಂಬೈಯಲ್ಲಿ ಸ್ವೇಚ್ಛಾಚಾರ ದಿಂದಿದ್ದ ತರುಣಸ್ತ್ರೀಯರ ಸ್ವಭಾವವು ವಿಲಕ್ಷಣವಿರುತ್ತದೆ. ಅವರು ಯಾವ ಕಾಲಕ್ಕೆ ಯಾರ ಮೇಲೆ ಏನು ಸಂಕಟ ತರುವರೆಂಬ ನಿಯಮವಿಲ್ಲ.''

ಈ ಮೇರೆಗೆ ರಾಮಭಾವು ಹಾಗು ಖಂಡೇರಾಯ ಇವರ ಸಂಭಾಷಣವು ನಡೆದಿರಲು ಅಲ್ಲಿಗೆ ಒಬ್ಬ ಗೃಹಸ್ಥನು ಬಂದನು. ಆತನು ಒಂದು ಹೊಲಸಾದ ಒಳ್ಳಿಯನ್ನುಟ್ಟಿದ್ದನು; ಒಂದು ಹೊಲಸಾದ ಪೈರಣವನ್ನು ಹಾಕಿದ್ದನು. ತಲೆಗೆ ಒಂದು ಹೊಲಸಾದ ಟೊಪ್ಪಿಗೆ ಹಾಕಿದ್ದನು. ಬೀಡಿಯನ್ನು ಸೇದಿ ಸೇದಿ ಅವನ ದೇಹವು ಕಾಷ್ಠದಂತೆ ನೀರಸವಾಗಿತ್ತು. ಅವನ ಮೋರೆಯ ಮೇಲೆ ನಿಸ್ತೇಜದ ಕಳೆಯಿತ್ತು. ಆ ಗೃಹಸ್ಥನು ಬಂದ ಕೂಡಲೆ ಖಂಡೇರಾಯನು ಗುರ್ತಿದ್ದವ ನಂತೆ ಅವನನ್ನು ಮಾತಾಡಿಸಿದನು. ಬಂದ ಆ ಗೃಹಸ್ಥನು ಒತ್ತಟ್ಟಿಗೆ ಕುಳಿತು ಕೊಂಡನು. ಬಳಿಕ ಅವನು—ರಾಯರೇ, ನಾನು ಅಡಿಗೆಯವನು, ನಿಮ್ಮಲ್ಲಿ ಕೆಲದಿನ ಇರಬೇಕೆಂದು ಬಂದಿರುವೆನು. ಇಟ್ಟುಕೊಂಡರೆ ಒಳ್ಳೇದಾಗುವದು ಎಂದು ನುಡಿದನು. ರಾಮಭಾವುವು ಸೆಟ್ಟಗೆ ಕುಳಿತು—ಅಡಿಗೆಯವನ ಅವಶ್ಯ ಕತೆಯದೆ; ಆದರೆ ಈಗಿನ ಜನರನ್ನು ನಂಬಲಿಕ್ಕೆ ಬರುವದಿಲ್ಲ. ಎಷ್ಟೋ ಜನ ಅಡಿಗೆಯವರು ಯಜಮಾನನಿಗೆ ಚನ್ನಾಗಿ ಕೈತೋರಿಸಿ ಓಡಿಹೋಗುವರು ಎಂದು ನುಡಿದನು. ಆಗ ಖಂಡೇರಾಯನು ನಡುವೇ ಬಾಯಿಹಾಕಿ ಛೇ, ಛೇ, ರಾಯ ರೇ, ಈ ಹುಡುಗನು ಅಂಥವನಲ್ಲ, ಈತನ ಗುರ್ತು ನನಗುಂಟು; ನಿಮ್ಮ ಸುದ್ದಿ ಯಿಂದಲೇ ಇವನು ಇಲ್ಲಿಗೆ ಬಂದಿದ್ದಾನೆ. ನೀವು ಇಂಥ ಬೇನೆಯಲ್ಲಿ ಕೈಯಿಂದ ಅಡಿಗೆಮಾಡಿಕೊಳ್ಳುವದು ಸಾಧ್ಯವಿಲ್ಲ. ಅನಾಯಾಸವಾಗಿ ಉತ್ತಮ ಅಡಿಗೆ ಯವನು ಬಂದಿದ್ದಾನೆ.; ಯಾವ ಅನುಮಾನವನ್ನೂ ಮಾಡದೆ ಇಟ್ಟುಕೊಂಡು

ಬಿಡಿರಿ ಎಂದು ನುಡಿದು ಅಡಿಗೆಯವನ ಮೋರೆಯನ್ನು ನೋಡಿದನು. ಅಡಿಗೆಯವನು ಮುಖಭಾವದಿಂದಲೇ ಕೃತಜ್ಞತೆಯನ್ನು ವ್ಯಕ್ತಗೊಳಿಸಿದನು. ಖಂಡೇರಾಯನ ಸವಿಮಾತುಗಳಿಗೆ ಮರುಳಾದ ರಾಮಭಾವುವು ಅಡಿಗೆಯವನಿಗೆ ತನ್ನಲ್ಲಿ ಆಶ್ರಯವಿತ್ತನು. ಬಳಿಕ ಖಂಡೇರಾಯನು ರಾಮಭಾವೂನ ನಿರೋಪ ತಕ್ಕೊಂಡು ಹೊರಟನು. ಆತನು ಹೊರಗೆ ಬರಲು ಅಡಿಗೆಯವನು ಅವನ ಸನ್ನೆಯಿಂದ ಅವನ ಬೆನ್ನಟ್ಟಿ ಹೊರಗೆ ಹೋಗಿ —ರಾಯರೇ, ನಿಮ್ಮ ದಯದಿಂದ ಬಡವನಾದ ನಾನು ಅನ್ನಕ್ಕೆ ಹತ್ತಿದೆನು. ನನ್ನ ಗುರುತು ಪರಿಚಯವಿಲ್ಲದಿದ್ದರೂ ನೀವು ಹೀಗೆ ಮೈಮೇಲೆ ತಕ್ಕೊಂಡು ಮಾತಾಡಿ ಬಡವನಾದ ನನ್ನ ಕಲ್ಯಾಣಮಾಡಿದಿರಿ ಎಂದು ಕೃತಜ್ಞತೆಯನ್ನು ವ್ಯಕ್ತಗೊಳಿಸಿದನು. ಆಗ ಖಂಡೇರಾಯನು— ನಿನ್ನಿಂದ ನನ್ನ ಕೆಲಸಗಳು ಬಹಳ ಸಾಧಿಸತಕ್ಕವಿವೆ ಎಂದು ನುಡಿದು ಅವನ ಕಿವಿಯಲ್ಲಿ ಏನೇನೋ ಹೇಳಿ ಕಿಸೆಯೊಳಗಿನ ನೋಟಿನ ಪುಡಿಕೆಯನ್ನು ತೆಗೆದು ಹತ್ತು ರೂಪಾಯಿಗಳ ಐದು ನೋಟುಗಳನ್ನು ಅವನ ಕೈಯಲ್ಲಿಟ್ಟನು. ಒಮ್ಮೆಲೆ ಐವತ್ತು ರೂಪಾಯಿಗಳು ಸಿಕ್ಕದ್ದರಿಂದ ಆ ಅಡಿಗೆಯವನು ಹಿಗ್ಗಿ ಖಂಡೇರಾಯನು ಹೇಳಿದಂತೆ ನಡೆಯಲು ಒಪ್ಪಿಕೊಂಡನು.

ಹೀಗೆ ಖಂಡೇರಾಯನು ಕಾರಸ್ಥಾನಗಳನ್ನು ನಡಿಸಿರಲು, ಇತ್ತ ನಿರ್ಮಲೆಯು ಅರ್ಧಮರ್ಧ ಶುದ್ಧಿಯಮೇಲೆ ಬಂದು "ಬೇಡಿರಿ, ಹೀಗೆ ನನ್ನಮೇಲೆ ಪಾಪಬುದ್ಧಿಯನ್ನು ತಾಳಬೇಡಿರಿ! ನಿಮ್ಮ ಚರಣಗಳನ್ನು ಹಿಡಿಯುತ್ತೇನೆ ನನ್ನನ್ನು ಹೊಟ್ಟೆಯ ಮಗಳೆಂದು ತಿಳಿದು ನನ್ನ ಮಾವನ ಮನೆಗೆ ಮುಟ್ಟಿಸಿ ಪುಣ್ಯಕಟ್ಟಿಕೊಳ್ಳಿರಿ" ಎಂದು ಬಡಬಡಿಸಲಾರಂಭಿಸಿದಳು. ನಾರಾಯಣರಾಯನೂ ನರ್ಸಳೂ ಕೂಡಿ ಒಳ್ಳೇ ಉಪಚಾರದಿಂದ ಆಕೆಯ ಎದುಳಿನ ವಿಕಾರವನ್ನು ಕಡಿಮೆ ಮಾಡಿದರು. ನಿರ್ಮಲೆಯು ಪೂರ್ಣ ಶುದ್ಧಿಯಮೇಲೆ ಬಂದು ತಾನು ಎಲ್ಲಿರುವೆನೆಂದು ಕೇಳಿದಳು. ಬಳಿಯಲ್ಲಿದ್ದ ನರ್ಸಳು ಆಕೆಗೆ ಎಲ್ಲ ಸಂಗತಿಯನ್ನು ಹೇಳಿದಳು. ತಾನು ಆ ದುಷ್ಟ ಖಂಡೇರಾಯನ ಬಲೆಯಿಂದ ಪಾರಾಗಿರುವೆನೆಂದು ಆಕೆಗೆ ಸಮಾಧಾನವಾಯಿತು. ಅಷ್ಟರಲ್ಲಿ ನಾರಾಯಣರಾಯನು ಬಂದನು. ಪ್ರಥಮ ದರ್ಶನಕ್ಕೇ ನಿರ್ಮಲೆಯಲ್ಲಿ ಆ ತರುಣ ನಾರಾಯಣರಾಯನ ವಿಷಯವಾಗಿ ಪರಮಾದರವುಂಟಾಯಿತು. ನಾರಾಯಣರಾಯನು ಆಕೆಗೆ ಪರಮ ಆಪ್ತನಂತೆ ತೋರಿದನು.

ವಿಪತ್ತಿನಲ್ಲಿ ಸಿಕ್ಕ ತರುಣಿಯು ಬದುಕಿದಳೆಂದು ನಾರಾಯಣರಾಯನಿಗೂ ತುಂಬಾ ಸಂತೋಷವಾಯಿತು. ಅವನು ಆಕೆಗೆ ಅಭಯವನ್ನು ಕೊಟ್ಟು ಆಕೆಯಲ್ಲಿ ಶಕ್ತಿಬರುವಂತೆ ಉತ್ತಮ ಔಷಧೋಪಚಾರ ನಡಿಸಿದನು. ನಿರ್ಮಲೆಯು ಪೂರ್ಣ ಆರೋಗ್ಯವನ್ನು ಹೊಂದಿದ ಬಳಿಕ ತಾನು ಯಾರು ಇಲ್ಲಿಗೆ ಯಾಕೆ ಬಂದೆನು. ಖಂಡೇರಾಯನೆಂಬ ನರಪಶುವು ತನ್ನನ್ನು ಹ್ಯಾಗೆ ಮೋಸಗೊಳಿಸಿದನು ಇತ್ಯಾದಿ ಸಂಗತಿಗಳನ್ನು ಹೇಳಿದಳು. ಆ ತರುಣಿಯು ಸರಳಹೃದಯದ ಮಾತುಗಳನ್ನು ಕೇಳಿ ನಾರಾಯಣರಾಯನು—"ನೀನು ಇನ್ನು ಮುಂದೆ ಸ್ವಸ್ಥಚಿತ್ತದಿಂದಿರು ನಿನ್ನನ್ನು ನಿನ್ನ ಮಾವನ ಮನೆಗೆ ಸುರಕ್ಷಿತವಾಗಿ ಮುಟ್ಟಿಸುತ್ತೇನೆ. ನಿನ್ನನ್ನು ನಿನ್ನ ಮಾವನ ಮನೆಗೆ ಮುಟ್ಟಿಸಿದ ವಿನಃ ನಾನು ಮುಂಬೈಗೆ ಹೋಗುವದಿಲ್ಲ" ಎಂದು ವಚನ ಕೊಟ್ಟನು. ನಾರಾಯಣರಾಯನಂಥ ದೊಡ್ಡ ಮನುಷ್ಯನು ಹೀಗೆ ವಚನ ಕೊಟ್ಟದ್ದನ್ನು ನೋಡಿ ಆಕೆಯು ತುಂಬಾ ಸಂತೋಷಪಟ್ಟಳು.

ಮುಂದೆ ಒಂದೆರಡು ದಿನಗಳ ಮೇಲೆ ನಾರಾಯಣರಾಯನು ನಿರ್ಮಲೆಯೊಡನೆ ವಳವಯೀಗೆ ಹೊರಟನು. ವಳವಯೀಯು ಒಂದೆರಡು ಮೈಲು ದೂರ ಇರುತ್ತಲೇ ಅಲ್ಲಿಗೆ ದೊಡ್ಡ ದಾರಿಯು ತಪ್ಪುವದು. ಆದ್ದರಿಂದ ನಾರಾಯಣರಾಯನು ಮೋಟಾರನ್ನು ಅಲ್ಲಿಗೇ ನಿಲ್ಲಿಸಿ ಕಾಲಿನಿಂದ ನಡೆಯುತ್ತ ಹೊರಟನು. ಆತನು ಹ್ಯಾಗಾದರೂ ಕಷ್ಟಪಟ್ಟು ವಳವಯೀಯನ್ನು ಮುಟ್ಟಿ ರಾಮಭಾವೂನ ಮನೆಗೆ ಹೋದನು. ಆದರೆ ಖಂಡೇರಾಯನ ಹಸ್ತಕನಾದ ಅಡಿಗೆಯವನು ನಾರಾಯಣರಾಯನನ್ನೂ ನಿರ್ಮಲೆಯನ್ನೂ ಒಳಗೆ ಬರಗೊಡಲಿಲ್ಲ. ನಿರ್ಮಲೆಯು ನಾರಾಯಣರಾಯನೆಂಬ ಯಾವನೋ ಒಬ್ಬ ವಕೀಲನ ಮನೆಯಲ್ಲಿರುವಳೆಂಬದನ್ನು ಖಂಡೇರಾಯನು ಗೊತ್ತು ಹಚ್ಚಿದ್ದನು. ಆದ್ದರಿಂದ ಅವನು ತನ್ನ ಹಸ್ತಕನಾದ ಅಡಿಗೆಯವನಿಗೆ ಆ ರೀತಿ ಅಪ್ಪಣೆ ಮಾಡಿದ್ದನು. ನಾರಾಯಣರಾಯನು ನಿರ್ಮಲೆಯೊಡನೆ ರಾಮಭಾವೂನ ಮನೆಗೆ ಹೋದಾಗ ಹೊತ್ತು ಮುಳುಗುತ್ತ ಬಂದಿತ್ತು; ಎಷ್ಟು ಹೇಳಿದರೂ ಅಡಿಗೆಯವನು ಕೇಳಲಿಲ್ಲ. ರಾಮಭಾವೂನ ಭೆಟ್ಟೀಮಾಡಿಸುವದೊತ್ತಟ್ಟಿಗಿರಲಿ ಬಾಗಿಲ ಮುಂದೆಕೂಡ ನಿಲ್ಲಗೊಡಲಿಲ್ಲ. ನಾರಾಯಣರಾಯನು ಉಪಾಯವಿಲ್ಲದೆ ಆ ದಿನರಾತ್ರಿಯಲ್ಲಿ ಕಷ್ಟಬಡುತ್ತ ತಿರುಗಿ ಫೋಂಡ್ಯಾಗ್ರಾಮಕ್ಕೆ ಹೋದನು. ಆತನು ಬೇರೆಹಂಚಿಕೆಗಳನ್ನು ಹುಡುಕಿ ಮರುದಿನ ಒಬ್ಬನೇ ರಾಮಭಾವೂನ ಮನೆಗೆ ಹೋದನು. ಆ ದಿನವೂ ಆ ಪಾಕಶಾಸ್ತ್ರಿಯು ಅವನನ್ನು ಒಳಗೆ

ಬಿಡಲಿಲ್ಲ. ಆ ದಿನ ರಾಮಭಾವೂನ ಪ್ರಕೃತಿಯನ್ನು ನೋಡುವದಕ್ಕೆ ಒಬ್ಬ ಡಾಕ್ಟರನು ಬಂದಿದ್ದನು. ಡಾಕ್ಟರನು ಹೊರಗೆ ಬಂದ ಬಳಿಕ ನಾರಾಯಣರಾಯನು ಆತನ ಪರಿಚಯ ಮಾಡಿಕೊಂಡು ರಾಮಭಾವೂನ ಪ್ರಕೃತಿಯ ಸಂಬಂಧವಾಗಿ ವಿಚಾರಿಸಿದನು. ರಾಮಭಾವೂನಿಗೆ ಬೇರೆ ಜಡ್ಡು ಏನೂ ಇಲ್ಲ ಆತನಿಗೆ ವಿಷ ಪ್ರಯೋಗವಾಗಿದೆ. ಚನ್ನಾಗಿ ಚಿಕಿತ್ಸೆಯಾಗದಿದ್ದರೆ ಅವನು ಬದುಕುವ ಲಕ್ಷಣ ತೋರುವದಿಲ್ಲ. ಆತನಿಗೆ ಸಂಬಂಧಿಕರು ಯಾರಾದರೂ ಇರುವರೋ ಏನೋ ಎಂದು ಡಾಕ್ಟರನು ಉತ್ತರ ಕೊಟ್ಟನು. ವಿಷಪ್ರಯೋಗವೆಂಬ ಮಾತು ಕೇಳಿ ಇದು ವಿಷಕುಂಭದಂತಿರರುವ ಖಂಡೇರಾಯನ ಕಾರಸ್ಥಾನವಿರಬಹುದೆಂದು. ನಾರಾಯಣರಾಯನು ಕೂಡಲೆ ತರ್ಕಿಸಿದನು. ಆ ಅಡಿಗೆಯವನು ಆತನ ಹಸ್ತಕನಿರಬಹುದು, ಎಂದೂ ನಿರ್ಧರಿಸಿದನು. ಬಳಿಕ ಅವನು ಡಾಕ್ಟರನಿಗೆ ಎಲ್ಲ ಸಂಗತಿಗಳನ್ನು ನಿವೇದಿಸಿದನು. ಡಾಕ್ಟರನೂ ನಾರಾಯಣರಾಯನೂ ಕೂಡಿ ಖಂಡೇರಾಯನ ಪಾರುಪತ್ಯ ಮಾಡುವದನ್ನು ನಿರ್ಧರಿಸಿ, ಇಂಥ ದಿನ ನೀವು ನಮ್ಮ ಆಫೀಸಿಗೆ ಬರಬೇಕೆಂದು ಡಾಕ್ಟರನು ನಾರಾಯಣರಾಯನಿಗೆ ಹೇಳಿದನು.

---

## (೬) ದೌರ್ಜನ್ಯದ ಪರಮಾವಧಿ.

ಡಾಕ್ಟರನು ಹೇಳಿದ ದಿನವು ಬಂದಿತು. ಆ ದಿನ ನಾರಾಯಣರಾಯನು ನಸಕಿನಲ್ಲೆದ್ದು ಸ್ನಾನಾದಿಗಳನ್ನು ತೀರಿಸಿ ಸ್ವಲ್ಪ ಉಪಾಹಾರವನ್ನು ಮಾಡಿ ನಿರ್ಮಲೆಯನ್ನು ಕುರಿತು—ನಾನು ಈ ದಿನ ಕೈರಿ ಎಂಬಲ್ಲಿಗೆ ಡಾಕ್ಟರರ ಕಡೆಗೆ ಹೋಗಿ ಖಂಡೇರಾಯನ ಪಾರುಪತ್ಯೆಗಾಗಿ ಪೂರ್ವಸಿದ್ಧತೆಯನ್ನು ಮಾಡುವೆನು. ನೀನು ಮನೆಯಲ್ಲಿ ಸ್ವಸ್ಥವಾಗಿರು. ಈ ಪ್ರಾಂತವು ನಿನಗೆ ಪರಿಚಯದ್ದಲ್ಲದ್ದರಿಂದ ಯಾರ ಮನೆಗೂ ಹೋಗಬೇಡ. ನಿರ್ಭಯದಿಂದ ಇರು, ಎಂದು ಹೇಳಿದನು. ಆಗ ನಿರ್ಮಲೆಯು ಕೃತಜ್ಞತೆಯಿಂದ—ನಾರಾಯಣರಾವ, ನನ್ನಿಂದ ತಮಗೆ ಬಹಳ ತ್ರಾಸವಾಯಿತು. ಮಹತ್ವದ ನೂರಾರು ಕೆಲಸಗಳನ್ನು ಬಿಟ್ಟು ಕ್ಷುದ್ರಳಾದ ನನ್ನ ಹಿತಕ್ಕಾಗಿ ತಾವು ಇಷ್ಟೊಂದು ಪ್ರಯತ್ನಪಡುತ್ತಿರುವದಕ್ಕಾಗಿ ನಾನು ತಮಗೆ ತುಂಬಾ ಕೃತಜ್ಞಳಾಗಿರುತ್ತೇನೆ, ಎಂದು ನುಡಿದಳು. ನಾರಾ

ಯಣರಾಯನು ಮೋಟಾರಿನಲ್ಲಿ ಕುಳಿತು ಕೈರಿ ಗ್ರಾಮಕ್ಕೆ ಹೋದನು. ಇತ್ತ ನಿರ್ಮಲೆಯು ನಾರಾಯಣರಾಯನ ಟೇಬಲ್ಲಿನ ಮೇಲಿದ್ದ ಪುಸ್ತಕಗಳಲ್ಲಿ "ಸಮರ್ಥರ ಶ್ರೀ ದಾಸಬೋಧ" ಎಂಬ ಪುಸ್ತಕವನ್ನು ತಕ್ಕೊಂಡು ಓದಹತ್ತಿದಳು.

ಮಧ್ಯಾಹ್ನದ ೧೧ ಗಂಟೆಯ ಸಮಯಕ್ಕೆ ಒಬ್ಬ ಮುದುಕನು ನಿರ್ಮಲೆಯ ಬಳಿಗೆ ಬಂದು—ಬಾಯಿಯವರೇ, ನಾರಾಯಣರಾವ ವಕೀಲರು ತಮಗೊಂದು ಪತ್ರವನ್ನು ಕೊಟ್ಟಿದ್ದಾರೆ. ಅವರು ಖಂಡೇರಾಯನನ್ನು ಹಿಡಕೊಂಡು ಬಂದಿದ್ದಾರೆ; ಆದರೆ ಅವರಿಗೆ ಖಂಡೇರಾಯನ ಗುರತು ಇಲ್ಲದ್ದರಿಂದ ಆತನು ಖಂಡೇರಾಯನೇ ಅಹುದು, ಎಂದು ಹೇಳುವದಕ್ಕೆ ತಮ್ಮನ್ನು ಕರೆಯಕಳುಹಿದ್ದಾರೆ. ಇಲ್ಲಿಂದ ಅರ್ಧ ಮೈಲಿನ ಅಂತರದಲ್ಲಿ ನಾರಾಯಣರಾಯರು ನಿಂತಿರುವರು. ಈ ಪತ್ರವನ್ನು ಓದಿಕೊಳ್ಳಿರಿ; ಹಾಗು ನನ್ನೊಡನೆ ಬೇಗನೆ ಹೊರಡಿರಿ, ಎಂದು ನುಡಿದನು. ನಿರ್ಮಲೆಯು ಪತ್ರವನ್ನು ತಕ್ಕೊಂಡು ಓದಿದಳು. ಅದರಲ್ಲಿ ಆ ಮನುಷ್ಯನು ಹೇಳಿದಂತೆಯೇ ಸಂಗತಿಯಿತ್ತು. ನಾರಾಯಣರಾಯನ ಅಕ್ಷರಗಳ ಪರಿಚಯವು ಆಕೆಗಿರಲಿಲ್ಲ. ಆದ್ದರಿಂದ ಆಕೆಗೆ ಈ ಪತ್ರವು ನಾರಾಯಣರಾಯರದು ಅಹುದೋ ಅಲ್ಲವೊ ಎಂಬದು ತಿಳಿಯಲಿಕ್ಕೆ ಆಸ್ಪದವೇ ಇರಲಿಲ್ಲ. ಆಕೆಗೆ ಅನುಮಾನವಾಯಿತು; ನಾರಾಯಣರಾಯರು ನನ್ನನ್ನು ಕರೆಸುವ ಕಾರಣವೇನು? ಖಂಡೇರಾಯನನ್ನು ಹಿಡಿದುಕೊಂಡು ಬಂದಿದ್ದರೆ ಮನೆಗೇ ಬರಬಹುದಾಗಿತ್ತಲ್ಲ! ಈಗ ಅವರ ಪತ್ರವನ್ನು ನಂಬಿಹೋದರೆ ಏನಾದರೂ ಅನರ್ಥ ಒದಗಲಿಕ್ಕಿಲ್ಲವಷ್ಟೇ; ಒಂದು ವೇಳೆ ಹೋಗದಿದ್ದರೆ ನನ್ನ ಸಲುವಾಗಿ ಇಷ್ಟೊಂದು ಕಷ್ಟಪಡುವ ನಾರಾಯಣರಾಯರ ಅಪಮಾನ ಮಾಡಿದಂತಾಗುತ್ತದೆ, ಎಂಬದಾಗಿ ಯೋಚಿಸಿದಳು. ಹ್ಯಾಗೆಮಾಡಬೇಕೆಂಬದು ಆಕೆಗೆ ತಿಳಿಯದಾಯಿತು. ಪತ್ರದಲ್ಲಿ ಮೋಸವಿರಬಹುದೆಂಬ ಕಲ್ಪನೆಯು ಆಕೆಗೆ ಬರಲಿಲ್ಲ.

ನಿರ್ಮಲೆಯು ಇನ್ನೂ ಚಿಕ್ಕವಳು; ಆಕೆಗೆ ಜಗತ್ತಿನ ಅನುಭವವು ಸ್ವಲ್ಪಾದರೂ ಇರಲಿಲ್ಲ. ಆಕೆಯು ಬರಿಯ ಪುಸ್ತಕೀ ಶಿಕ್ಷಣವನ್ನು ಹೊಂದಿ ಕೇವಲ ಹೊಟ್ಟೆಯ ಪಾಡಿಗಾಗಿ ನರ್ಸಳಾಗಿದ್ದಳು; ಜಗತ್ತು ಹ್ಯಾಗಿದೆ ಎಂಬದರ ಕಲ್ಪನೆಯು ಆಕೆಗಿರಲಿಲ್ಲ. ನಾರಾಯಣರಾಯರು ಪತ್ರ ಕಳಿಸಿದ್ದೇ ನಿಜವೆಂದು ನಂಬಿದಳು. ಮೇಲಾಗಿ ಕರೆಯ ಬಂದ ಮನುಷ್ಯನು ಮುದುಕನಿದ್ದದರಿಂದ ಇಂಥ ದಿನಹೋದ ಮನುಷ್ಯನು ತನಗೆ ಮೋಸ ಮಾಡಲಿಕ್ಕಿಲ್ಲವೆಂದು ಆಕೆಯು ಚಟ್ಟನೆದ್ದು, ಮನೆಗೆ ಕೀಲೀ ಹಾಕಿ, ಆ ಮುದುಕನೊಡನೆ ಹೊರಟಳು.

ಮುದುಕನು ಭರದಿಂದ ದಾರೀ ನಡೆಯುತ್ತ ಸಮೀಪದ ಒಂದು ಹಳ್ಳಿಗೆ ಹೋದನು. ಊರ ಹೊರಭಾಗದಲ್ಲಿ ಒಂದು ದೊಡ್ಡ ಮನೆಯಿತ್ತು. ಆ ಮನೆಯ ಮುಂದೆ ಹೋಗಿ ನಿಂತನು. ಆಗ ನಿರ್ಮಲೆಯು ನಾರಾಯಣರಾಯನನ್ನು ಕಾಣದೆ, ನಾರಾಯಣರಾಯರು ಎಲ್ಲಿರುವರು? ಎಂದು ಆ ಮುದುಕನನ್ನು ಕೇಳಿದಳು. ಕೂಡಲೆ ಅವನು—ಒಳಗೆ ಇರುವರು, ಎಂದು ಉತ್ತರ ಕೊಟ್ಟನು. ನಿರ್ಮಲೆಯು ಮನಸ್ಸಿನಲ್ಲಿ ಯಾವ ಸಂಶಯುವನ್ನೂ ತಕ್ಕೊಳ್ಳದೆ ಆ ಮನೆಯೊಳಕ್ಕೆ ಹೋದಳು. ಕೂಡಲೆ ಹೊರಗೆ ನಿಂತಿರುವ ಆ ಮುದುಕನು ಅವಸರದಿಂದ ಕದವನ್ನು ಹಾಕಿಕೊಂಡನು. ನಿರ್ಮಲೆಯು ಗಾಬರಿಯಾದಳು. ಆಕೆಯ ಹೃದಯವು ನಡುಗಲಾರಂಭಿಸಿತು. ನಾರಾಯಣರಾವ-ನಾರಾಯಣರಾವ ಎಂದು ಕೂಗಿದಳು. ಅಷ್ಟರಲ್ಲಿ ನಾರಾಯಣರಾಯರ ಬದಲು ವಿಕಟಹಾಸ್ಯ ಮಾಡುವ ಖಂಡೇರಾಯನ ಮೂರ್ತಿಯು ಆಕೆಯ ಎದುರಿಗೆ ನಿಂತಿತು. ಆಗ ಅವನು—ನಿರ್ಮಲೇ, ಇನ್ನೆಲ್ಲಿ ನಾರಾಯಣರಾಯನು? ವಕೀಲನಿದ್ದರೆ ಮುಂಬೈಯಲ್ಲಿ; ಆದರೆ ಆ ಸೊಟ್ಟ ವಕೀಲಿಯ ಆಟವು ನಮ್ಮ ಗೋಮಾಂತಕದಲ್ಲೇನು ನಡೆಯುವದು? ನೀನು ಇನ್ನು ಮುಂದೆ ನಾರಾಯಣರಾಯನ ಆಶೆಯನ್ನು ಬಿಟ್ಟು ಬಿಡು; ಇನ್ನು ಮುಂದೆ ನೀನು ನನ್ನ ಕೈಯಿಂದ ಪಾರಾಗಲಾರೆ; ನೀನು ನನಗೆ ಒಮ್ಮೆ ಮೋಸ ಮಾಡಿ ಹೋದದ್ದರಿಂದ ನಾನು ಈ ಸಾರೆ ನಿನ್ನನ್ನು ಬಹಳ ಎಚ್ಚರದಿಂದ ಕಾಯಬೇಕಾಗಿದೆ. ಸುಮ್ಮನೆ ಮೊಂಡತನವನ್ನು ಮಾಡಿ ನಿನ್ನ ಅಕಲ್ಯಾಣವನ್ನು ಮಾಡಿಕೊಳ್ಳಬೇಡ; ಹಿಂದಕ್ಕೆ ನೀನು ನನ್ನ ಕೈಗೆ ಸಿಕ್ಕಾಗ ಕೇವಲ ಕಾಮೇಚ್ಛೆಯನ್ನು ತೃಪ್ತಿಪಡಿಸಿಕೊಂಡು ನಿನ್ನನ್ನು ಬಿಟ್ಟು ಬಿಡಬೇಕೆಂದು ಮಾಡಿದ್ದನು; ಆದರೆ ಈ ಸಾರೆ ಹಾಗೆ ಮಾಡಲು ನನಗೆ ಇಚ್ಛೆಯಿಲ್ಲ. ನಿನ್ನ ಲಗ್ನವನ್ನು ಮಾಡಿಕೊಂಡು ನಿನ್ನೊಡನೆ ಸುಖದಿಂದ ಸಂಸಾರವ ಮಾಡಬೇಕೆಂದು ನನ್ನ ಇಚ್ಛೆಯದೆ. ನನ್ನಲ್ಲಿ ಅಪಾರದ್ರವ್ಯವಿದೆ. ಅದಕ್ಕೆಲ್ಲ ನೀನೇ ಯಜಮಾನಳು. ಮೇಲಾಗಿ ನಿನ್ನ ಮಾವನು ನನ್ನ ಕೈಯಲ್ಲಿ ಪೂರ್ಣವಾಗಿ ಸಿಕ್ಕಿರುವನು. ಅವನ ಆಸ್ತಿಯನ್ನೆಲ್ಲ ನಿನಗೆ ಮಾಡಿಸುವೆನು. ವಸ್ತುಸ್ಥಿತಿಯು ಹೀಗೆ ಅದೆ. ಬಹಳ ಯೋಚನೆ ಮಾಡುವ ಭರಕ್ಕೆ ಬೀಳಬೇಡ; ಸುಮ್ಮನೆ ನನ್ನ ಮಾತಿಗೆ ಒಪ್ಪಿಕೋ, ಎಂದು ನುಡಿದನು. ನಿರ್ಮಲೆಯು ಸ್ವಲ್ಪ ಧೈರ್ಯವನ್ನು ತಂದುಕೊಂಡು “ಖಂಡೇರಾವ ನೀವು ನನಗೆ ಹೀಗೇಕೆ ಶನಿಯಂತೆ ಕಾಡಹತ್ತಿರುವಿರಿ? ಹಾಯ್! ಹಾಯ್! ಎಂಥ ಮೋಸಗಾರರು ನೀವು? ದೇವರೇ, ನನಗೆಂಥ ವಿಪತ್ತು ಪ್ರಾಪ್ತವಾಯಿತಲ್ಲ?” ಎಂದು

ಅಳುತ್ತ ಒಮ್ಮೆಲೆ ಕುಸಿಕುಳಿತಳು.

ಪ್ರಿಯವಾಚಕರೇ, ನಿರ್ಮಲೆಯು ಹೀಗೆ ಖಂಡೇರಾಯನ ದವಡೆಯೊಳಗೆ ಪುನಃ ಸಿಕ್ಕು ಗೋಳಾಡಹತ್ತಿರಲು, ಇತ್ತ ನಾರಾಯಣರಾಯನು ಏನು ನಡಿಸಿರುವನೆಂಬದನ್ನು ನೋಡೋಣ ನಡೆಯಿರಿ.

ನಾರಾಯಣರಾಯನು ಕೈರಿ ಗ್ರಾಮಕ್ಕೆ ಹೋಗಿ ಡಾಕ್ಟರನಿಗೆ ಭೆಟ್ಟಿಯಾಗಿ ಅವನಿಂದ ಎಲ್ಲ ಸಂಗತಿಯನ್ನು ತಿಳಿದುಕೊಂಡು ಖಂಡೇರಾಯನು ಪೂರ್ಣ ಅಪರಾಧಿಯಿರುವನೆಂದು ನಿರ್ಧರಿಸಿದನು. ಪೋಲೀಸರನ್ನು ಕರೆದೊಯ್ದು ಆತನನ್ನು ಈಗಲೇ ದಸ್ತಗೀರ ಮಾಡಿಸಬೇಕೆಂದು ನಿಶ್ಚಯಿಸಿ ಅದಕ್ಕೆ ಡಾಕ್ಟರನ ಸಮ್ಮತಿಯನ್ನು ಪಡೆದು ಈ ಆನಂದದ ಸುದ್ದಿಯನ್ನು ನಿರ್ಮಲೆಗೆ ತಿಳಿಸಬೇಕೆಂದು ಘೋಂಪ್ಯಾಗ್ರಾಮಕ್ಕೆ ಬಂದನು. ಆದರೆ ಮನೆಗೆ ಕೀಲೀ ಹಾಕಿದ್ದನ್ನು ನೋಡಿ ಅವನು ತುಂಬಾ ದಿಗಿಲುಗೊಂಡು—ನಿರ್ಮಲೆಯು ಎಲ್ಲಿಹೋಗಿರಬಹುದು? ಎಂದು ಆಲೋಚಿಸಿದನು. ಆಕೆಯನ್ನು ಮತ್ತೆ ಯಾರು ಮೋಸಗೊಳಿಸಿದರೋ ಎಂಬ ಸಂಶಯವು ಅವನನ್ನು ಬಾಧಿಸಿತು. ಆಗ ಅವನು ನೆರೆಹೊರೆಯವರನ್ನು ಕೇಳಿದನು. ಆಕೆಯು ಒಬ್ಬ ಮುದುಕ ಮನುಷ್ಯನ ಸಂಗಡ ಈಗೊಂದು ತಾಸಿನ ಮುಂದೆ ಹೋದಳೆಂದು ಒಬ್ಬರು ಹೇಳಿದರು. ಕೂಡಲೆ ನಾರಾಯಣರಾಯನ ಮನಸ್ಸಿನಲ್ಲಿ ಖಂಡೇರಾಯನೇ ಮತ್ತೆ ಈ ತರುಣಿಯನ್ನು ಮೋಸಗೊಳಿಸಿರಬಹುದೆಂಬ ಕಲ್ಪನೆಯು ಬಂದಿತು. ಕೂಡಲೆ ಅವನು ಅದೇ ಮೋಟಾರನ್ನು ತಿರುಗಿಸಿ ವಳವಯಿಗೆ ಹೋದನು. ಅವನು ನೆಟ್ಟಗೆ ರಾಮಭಾವೂನ ಮನೆಗೆ ಹೋದನು. ಖಂಡೇರಾಯನ ಹಸ್ತಕನಾದ ಪಾಕಶಾಸ್ತ್ರಿಯು ಹೊರಗೆ ಕಟ್ಟೆಯ ಮೇಲೆಯೇ ಕುಳಿತಿದ್ದನು. ನಾರಾಯಣರಾಯನು ಹೋದಕೂಡಲೆ ಆ ಪಾಕಶಾಸ್ತ್ರಿಗೆ ನಮಸ್ಕಾರಮಾಡಿ—ಏನು ಭಡಜಿಗಳೇ, ಎಲ್ಲವೂ ಕ್ಷೇಮವೇ? ಎಂದು ನುಡಿಯುತ್ತ ಅವನ ಕೈಯೊಳಗೆ ಒಂದು ನೂರು ರೂಪಾಯಿಯ ನೋಟನ್ನಿಟ್ಟನು. ಹಣವೆಂದರೆ ಹೆಣ ಬಾಯಿ ತೆರೆಯುವದು ಸುಳ್ಳಲ್ಲ. ಯಾವ ದುಡ್ಡಿನ ಆಶೆಯಿಂದ ಆ ಅಡಿಗೆಯವನು ಖಂಡೇರಾಯನ ಹಸ್ತಕನಾಗಿದ್ದನೋ ಆ ದುಡ್ಡಿನ ಆಶೆಯಿಂದಲೇ ಅವನು ಈಗ ನಾರಾಯಣರಾಯರ ಹಸ್ತಕನಾದನು. ಇದುವರೆಗೆ ಖಂಡೇರಾಯನು ಎಷ್ಟು ದುಡ್ಡು ಕೊಟ್ಟಿದ್ದರೂ ಈಗ ನಾರಾಯಣರಾಯನು ಕೊಟ್ಟಷ್ಟು ಆಗಿರಲಿಲ್ಲ. ಒಮ್ಮೆಲೆ ನೂರು ರೂಪಾಯಿಗಳು ಸಿಕ್ಕದ್ದನ್ನು ನೋಡಿ ಆ ಅಡಿಗೆಯವನು ನಾರಾಯಣರಾಯನಿಗೆ ವಿಲಕ್ಷಣ ಆದರವನ್ನು ಮಾಡಿ—

ರಾಯರೇ, ನಿಮಗೆ ರಾಮುಭಾವೂನ ಭೆಟ್ಟೀ ಮಾಡಿಸಲೇನು? ಆದರೆ ರಾಮುಭಾವೂ ಇವರು ಕೇವಲ ಅತ್ಯಾವಸ್ಥೆಯಲ್ಲಿರುವರು. ಅವರು ಇಂದೋ ನಾಳೆಯೋ ಅಸ್ನುತ್ತಿರುವರು. ನನಗೇನಿರಿ, ನೀವು ಮೊದಲೇ ಇಷ್ಟು ದುಡ್ಡುಕೊಟ್ಟಿದ್ದರೆ ನಿಮ್ಮನ್ನು ರಾಮುಭಾವೂ ಇವರಿಗೆ ಭೆಟ್ಟೀಮಾಡಿಸುತ್ತಿದ್ದೆನು. ನನಗೆ ಖಂಡೇರಾಯನೇನು ಇನ್ನೊಬ್ಬನೇನು? ನನಗೆ 'ದುಡ್ಡೇ ದೊಡ್ಡಪ್ಪ'. ದುಡ್ಡುಕೊಟ್ಟವರೇ ನಮ್ಮವರು. ಆಯಿತು, ಈ ಗೊಂದಲದಲ್ಲಿ ನನಗೆ ನೂರಿನ್ನೂರು ರೂಪಾಯಿಗಳು ದೊರೆತವು. ನಾನು ಮತ್ತೆ ನಾಟಕ ಕಂಪನಿಗೆ ಹೊರಟೆನು; ಮನುಷ್ಯನು ಇರುವತನಕ ತಿಂದದ್ದೇ ಬಂದಿತು. ಯಾರು ಏನು ಹೊತ್ತುಕೊಂಡು ಸಾಯುವರೋ, ಎಂದು ಸರಪಂಚಾಗವನ್ನೇ ಎಬ್ಬಿಸಿದನು. ನಾರಾಯಣರಾಯರಿಗೆ ಆತನ ಪಂಚಾಂಗವನ್ನು ಕೇಳುತ್ತ ಕೂಡ್ರಲಿಕ್ಕೆ ಅವಕಾಶವಿರಲಿಲ್ಲ. ನಿರ್ಮಲೆಯ ಗತಿಯು ಏನಾಗಿದೆಯೋ ಎಂಬದನ್ನು ಅವನು ಶೋಧ ಹಚ್ಚಬೇಕಾಗಿತ್ತು. ಆದ್ದರಿಂದ ಅವನು ಅಡಿಗೆಯವನನ್ನು ರಮ್ಮಿಸಿ—ತಮ್ಮಾ, ನನಗೆ ಈಗ ರಾಮುಭಾವೂನ ಭೆಟ್ಟಿಯ ಅವಶ್ಯಕತೆಯಿಲ್ಲ. ನನಗೆ ನಿನ್ನಿಂದ ಒಂದು ಮಹತ್ವದ ಸಂಗತಿಯು ತಿಳಿಯಬೇಕಾಗಿದೆ. ನೀನು ನಿಜಸಂಗತಿಯನ್ನು ಹೇಳಿದೆಯೆಂದರೆ ನಿನಗೆ ಇದಕ್ಕೂ ಹೆಚ್ಚಿನ ಪಾರಿತೋಷಕವನ್ನು ಕೊಡುತ್ತೇನೆ, ಎಂದು ನುಡಿದನು.

ನಾರಾಯಣರಾಯನ ಈ ಭಾಷಣವನ್ನು ಕೇಳಿ ಅಡಿಗೆಯವನು ಮತ್ತಷ್ಟು ಹಿಗ್ಗಿ ಅವನು—ರಾಯರೇ, ನನಗೆ ಗೊತ್ತಿದ್ದ ಸಂಗತಿಯನ್ನು ನಿಮ್ಮ ಮುಂದೆ ಅಕ್ಷರಶಃ ಹೇಳುವೆನು; ನಿಮ್ಮಿಂದ ದ್ರವ್ಯತಕ್ಕೊಂಡ ಬಳಿಕ ನಿಮ್ಮ ಸೇವೆಯನ್ನು ಮಾಡದಿದ್ದರೆ ಹ್ಯಾಗೆ? ಎಂದನು. ಆಗ ನಾರಾಯಣರಾಯನು—ಈಗ ಖಂಡೇರಾಯನು ಎಲ್ಲಿರುವನು? ಏನು ಮಾಡುವನು? ಎಂಬದನ್ನು ನನಗೆ ಹೇಳು, ಎಂದು ಕೇಳಲು, ಅಡಿಗೆಯವನು—ರಾಯರೇ, ಖಂಡೇರಾಯನು ಈಗ ಘೋಂಡ್ಯಾಗ್ರಾಮದ ಬಳಿಯಲ್ಲಿರುವ ದುರ್ಗಾ ಎಂಬ ಹಳ್ಳಿಯಲ್ಲಿರುವನು. ಅವನ ಮನೆಯು ಆ ಊರದಕ್ಷಿಣಭಾಗಕ್ಕೆ ಕೆಲ ಮನೆಗಳನ್ನು ಬಿಟ್ಟು ಇರುವದು. ಆ ಮನೆಯಲ್ಲಿ ನಿರ್ಮಲಾಬಾಯಿಯನ್ನು ಮೋಸದಿಂದ ಕರೆತಂದು ಸೆರೆ ಇಡಬೇಕೆಂದು ಆಲೋಚಿಸಿದ್ದನು. ಬಹುಶಃ ಅವನು ಈಗ ಅದೇ ಕೆಲಸವನ್ನೇ ನೆರವೇರಿಸುತ್ತಿರಬಹುದು, ಎಂದು ಹೇಳಿದನು. ಆ ಸಂಗತಿಯನ್ನು ಕೇಳಿ ನಾರಾಯಣರಾಯನು ಸಂತಪ್ತನಾಗಿ ಖಂಡೇರಾಯನ ಮನೆಯ ಗುರುತು ಪರಿಚಯಗಳನ್ನೆಲ್ಲ ಕೇಳಿಕೊಂಡು ಆ ಕೂಡಲೆ ಮೋಟಾರಿನಲ್ಲಿ ಕುಳಿತು ಘೋಂಡ್ಯಾಗ್ರಾಮಕ್ಕೆ

ಬಂದನು. ಬಳಿಕ ಅವನು ಪೋಲೀಸ ಕಚೇರಿಗೆ ಹೋಗಿ ಅಲ್ಲಿಯ ಫೌಜದಾರ ನಿಗೆ ಎಲ್ಲ ಸಂಗತಿಯನ್ನು ಹೇಳಿ ಅವನನ್ನೂ ಮೂರು ನಾಲ್ಕು ಜನ ಶಿಪಾಯಿ ಗಳನ್ನು ಕರಕೊಂಡು ಹೊರಟನು.

ಪ್ರಿಯವಾಚಕರೇ, ಖಂಡೇರಾಯನ ಪಾರುಪತ್ಯಕ್ಕಾಗಿ ಈ ರೀತಿ ನಾರಾಯಣರಾಯನು ಪ್ರಯತ್ನ ನಡಿಸಿರಲು, ಇತ್ತ ಆ ದುರ್ಜನನು ನಿರ್ಮಲೆಯ ವಿಟಂಬನೆಗೆ ಆರಂಭಿಸಿದ್ದನು. ಆತನು ಎಷ್ಟು ಪರಿಯಿಂದ ಹೇಳಿದರೂ ನಿರ್ಮ ಲೆಯು ಅವನಿಗೆ ಒಳಗಾಗುವ ಲಕ್ಷಣ ತೋರಲಿಲ್ಲ. ಅವನು ಆಕೆಗೆ ವೈಭವದ ಆಶೆ ತೋರಿಸಿದನು. ಹೆದರಿಕೆ ಹಾಕಿದನು. ಏನು ಮಾಡಿದನೂ ಆಕೆಯು ಮನ ಸೋಲಲಿಲ್ಲ. ಖಂಡೇರಾಯನ ಮನಸ್ಸಿನಲ್ಲಿ ನಿರ್ಮಲೆಯನ್ನು ಲಗ್ನಮಾಡಿ ಕೊಂಡು ರಾಮಭಾವೂನ ಆಸ್ತಿಯನ್ನು ಎತ್ತಿ ಹಾಕಬೇಕೆಂಬ ಹವಣಿಕೆಯಿತ್ತು. ಯಾಕಂದರೆ ರಾಮಭಾವೂನಿಗೆ ವಿಷಪ್ರಯೋಗ ಮಾಡಿದ್ದರಿಂದ ಅವನು ಇನ್ನು ಬಹಳ ದಿವಸ ಬದುಕಲಾರನೆಂಬದು ಆ ದುರ್ಜನನಿಗೆ ಗೊತ್ತಿತ್ತು. ಆದ್ದರಿಂದ ತಾನು ನಿರ್ಮಲೆಯ ಲಗ್ನವಾದರೆ ವಾರಸಾಹಕ್ಕಿನಿಂದ ರಾಮಭಾವೂನ ಆಸ್ತಿ-ಯು ತನಗೇ ದೊರಕುವದೆಂದು ಬಾಯಿ ಚಪ್ಪರಿಸುತ್ತಿದ್ದನು. ಆದರೆ ಆ ದುರ್ಜ ನನ ಹವಣಿಕೆಗೆ ನಿರ್ಮಲೆಯು ಅನುಕೂಲಳಾಗದ್ದರಿಂದ ಅವನ ಮನಸ್ಸಿಗೆ ಬಹು ವಿಷಾದವಾಯಿತು. ಈಕೆಯನ್ನು ಹೀಗೆಯೇ ಸೆರೆ ಇರಿಸಿದರೆ ಈಕೆಯು ಮತ್ತಾವ ಹಂಚಿಕೆಯಿಂದಾದರೂ ಪಾರಾಗಿ ಹೋಗಬಹುದು. ಆದ್ದರಿಂದ ಈಕೆಯ ಸತೀತ್ವವ ನ್ನು ಕೂಡಲೆ ಭಂಗಪಡಿಸಿದರೆ, ನಾಯಿಮುಟ್ಟಿದ ಗಡಿಗೆಯನ್ನು ಶೀಲವಂತರು ಪರಿ ಗ್ರಹಿಸದಂತೆ ಈಕೆಯನ್ನು ಉತ್ತಮ ಜನರು ಪರಿಗ್ರಹಿಸುವದಿಲ್ಲ. ಬಳಿಕ ಇವಳು ತಾನಾಗಿಯೇ ಪಶ್ಚಾತ್ತಾಪಪಟ್ಟು ನನ್ನವಳಾಗುವಳು, ಎಂದು ಮೂರ್ಖತನ ದಿಂದ ಆಲೋಚಿಸಿ, ಎದ್ದು ನಿಂತು ನಿರ್ಮಲೆಯ ಸಮೀಪಕ್ಕೆ ಹೋದನು.

ನಿರ್ಮಲೆಯು ಸಿಟ್ಟಿಗೆದ್ದ ನಾಗಿಣಿಯಂತೆ ಭುಸುಗುಡುತ್ತ—ದುಷ್ಟಾ, ನನ್ನ ಮೈ-ಕೈ ಮುಟ್ಟಿದರೆ ನಿನ್ನ ಗಂಟಲವನ್ನೇ ಹರಿಯುವೆನು, ಎಂದು ನುಡಿದು ದೂರ ಸರಿದು ನಿಂತಳು. ಖಂಡೇರಾಯನು ನಗುತ್ತ—ಸುಂದರೀ, ಸುಮ್ಮನೆ ಯಾಕೆ ಸಂತಾಪಗೊಳ್ಳುವಿ? ನಾನು ನಿನ್ನ ಹಿತವನ್ನು ಬಯಸುತ್ತಿರಲು, ನೀನು ನನಗೆ ಅಹಿತವನ್ನು ಬಯಸುವೆಯಾ? (ಸಿಟ್ಟಿನಿಂದ)—ದುಷ್ಟೇ, ಎಲ್ಲಿಗೆ ಹೋ-ಗುವಿ? ನನ್ನ ಗಂಟಲು ಸೀಳು, ನೋಡುತ್ತೇನೆ. ಹರಿಹರರು ಬಂದರೂ ಈಗ ನೀನು ನನ್ನ ಕೈಯಿಂದ ಪಾರಾಗಲಾರೆ, ಎಂದು ನುಡಿಯುತ್ತ ಆಕೆಯ ಕೈಗಳನ್ನು

ಗಟ್ಟಿಯಾಗಿ ಹಿಡಿದನು. ನಿರ್ಮಲೆಯು ಕೆಟ್ಟದನಿಯಿಂದ ಒಮ್ಮೆ ಚೀರಿ ಆ ದುಷ್ಟನ ಕೈಯೊಳಗಿಂದ ತನ್ನ ಕೈಯನ್ನು ಬಿಡಿಸಿಕೊಳ್ಳಲು ಪ್ರಯತ್ನಪಡಲಾರಂಭಿಸಿದಳು. ಅಷ್ಟರಲ್ಲಿ ಹೊರಗಿನಿಂದ—"ಬಂದೆ, ಬಂದೆ, ಅಂಜಬೇಡ, ಆ ದುಷ್ಟನ ಶಾಸನ ಮಾಡುತ್ತೇನೆ" ಎಂದು ಯಾರೋ ಕೂಗಿದಹಾಗಾಯಿತು. ನಿರ್ಮಲೆಯ ಕಿವಿಗಳು ವಿಸ್ತೃತವಾದವು; ಖಂಡೇರಾಯನು ಸ್ವಲ್ಪ ಅಂಜಿ ಬಾಗಿಲಕಡೆಗೆ ನೋಡಿದನು. ಖಂಡೇರಾಯನು ಒಳಗಿನಿಂದ ಬಾಗಿಲಕ್ಕೆ ಚಿಲಕ ಹಾಕದ್ದರಿಂದ ಹೊರಗೆ ಬಂದ ವ್ಯಕ್ತಿಯು ಅದನ್ನು ಸಹಜವಾಗಿ ತೆರೆಯಿತು. ಖಂಡೇರಾಯನು ನೋಡ ನೋಡುತ್ತಿರಲು ನಾರಾಯಣರಾಯನೂ, ಒಬ್ಬ ಫೌಜದಾರನೂ, ಇಬ್ಬರು ಜವಾನರೂ ಒಳಸೇರಿ ಖಂಡೇರಾಯನ ಎದುರಿಗೆ ನಿಂತರು. ನಿರ್ಮಲೆಯು ಆಯತ ಸಮಯಕ್ಕೆ ಬಂದ ನಾರಾಯಣರಾಯನನ್ನು ನೋಡಿ, ದೈನ್ಯವಾಣಿಯಿಂದ—"ನಾರಾಯಣರಾವ, ನಾರಾಯಣರಾವ, ಈ ದೀನಳನ್ನು ಈ ದುಷ್ಟನ ದವಡೆಯೊಳಗಿಂದ ಬಿಡಿಸಿಕೊಳ್ಳಿರಿ" ಎಂದು ನುಡಿದಳು. ನಾರಾಯಣರಾಯನು ನಿರ್ಮಲೆಯನ್ನು ಸಂತೈಸಿದನು. ಫೌಜದಾರನು ಖಂಡೇರಾಯನನ್ನು ದಸ್ತಗೀರಮಾಡಿದನು.

† † † † †

ಖಂಡೇರಾಯನಿಗೆ ಆತನ ನೀಚಕೃತ್ಯಕ್ಕಾಗಿ ಆರು ವರ್ಷಗಳ ಕಠಿಣ ಶಿಕ್ಷೆಯಾಯಿತು. ಆ ದುರ್ಜನನಿಗೆ ಆದ ಈ ಶಿಕ್ಷೆಯು ಅತ್ಯಲ್ಪವೆಂದು ಆತನ ಗುಣಗಳನ್ನು ಬಲ್ಲವರು ಆಡಿಕೊಂಡರು. ಯಾಕಂದರೆ ಆ ದುಷ್ಟನು ಇದುವರೆಗೆ ಅಸಂಖ್ಯ ಜನ ಕುಲಸತಿಯರ ಮಾನಭಂಗ ಮಾಡಿದ್ದನು. ಹಲವು ಭೋಳೇಜನರ ಮನೆಗಳನ್ನು ಮುರಿದು ಅವರನ್ನು ಭಿಕ್ಷೆಗೆ ಅಧಿಕಾರಿಗಳನ್ನಾಗಿ ಮಾಡಿದ್ದನು. ಅವರೆಲ್ಲರ ದುಃಖಾಶ್ರುಗಳು ಪ್ರಚಂಡ ಜ್ವಾಲೆಯಂತೆ ಆತನನ್ನು ಭಸ್ಮೀಭೂತವನ್ನಾಗಿಮಾಡಲು ಹವಣಿಸುತ್ತಿದ್ದವು! ಪಾಪ! ಮಾನವೀ ನ್ಯಾಯಾಧೀಶನಿಗೆ ಆತನ ಪಾಪಪರ್ವತದ ಆಳತೆಯು ಹ್ಯಾಗೆ ಹತ್ತಬೇಕು? ಎಲಾ ಚಾಂಡಾಲಾ, ನರಾಧಮಾ, ನಿನಗೆ ಈ ಲೋಕದಲ್ಲಿ ತಕ್ಕ ಶಾಸನವಾಗದಿದ್ದರೂ, ಪರಲೋಕದಲ್ಲಾದರೂ ತಕ್ಕ ಶಾಸನವಾಗದೆ ಇರದು!!

* * * * * *

ನಾರಾಯಣರಾಯನು ನಿರ್ಮಲೆಯೊಡನೆ ರಾಮುಭಾವೂನ ಮನೆಗೆ ಹೋದನು. ಅಷ್ಟರಲ್ಲಿ ಆ ಅಡಿಗೆಯವನು ಪಲಾಯನ ಹೇಳಿಸಿದ್ದನು. ಅವನನ್ನು ಪೋಲೀಸರಿಂದ ಹುಡುಕಿಸಿ ಆತನಿಗೂ ಶಿಕ್ಷೆ ಮಾಡಿಸಿದನು. ರಾಮುಭಾವುವು

ತೀರ ಮರಣೋನ್ಮುಖನಾದ್ದರಿಂದ ನಿರ್ಮಲೆಗೆ ಬಹಳ ದುಃಖವಾಯಿತು; ಆದರೆ ಡಾಕ್ಟರನು ಚೆನ್ನಾಗಿ ಚಿಕಿತ್ಸೆಮಾಡಿ ರಾಮಭಾವೂನ ವಿಷಬಾಧೆಯನ್ನು ನಿವಾರಣ ಮಾಡಿದನು. ಸ್ವಲ್ಪ ದಿವಸಗಳಲ್ಲಿ ರಾಮಭಾವೂನು ಬದುಕುವ ಆಶೆ ತೋರಿತು. ಅವನಿಗೆ ಗುಣವಾಗುವವರೆಗೆ ನಾರಾಯಣರಾಯನು ಅಲ್ಲಿಯೇ ನಿಂತುಕೊಂಡನು. ಆತನ ಪರೋಪಕಾರ ಬುದ್ಧಿಯನ್ನು ನೋಡಿ ರಾಮಭಾವೂನಿಗೆ ಪರಮ ಸಂತೋಷವಾಯಿತು.

\+ \+ \+ \+ \+ \+

ರಾಮಭಾವೂನ ಒಪ್ಪಿಗೆಯಂತೆ ನಿರ್ಮಲಾ-ನಾರಾಯಣರಾಯರ ವಿವಾಹ ವಾಯಿತು. ರಾಮಭಾವುವು ತನ್ನ ಆಸ್ತಿಯನ್ನೆಲ್ಲ ಸೊಸೆಯಹೆಸರಿಗೆ ಬರೆದುಕೊಟ್ಟನು. ನಿರ್ಮಲಾ-ನಾರಾಯಣರಾಯರ ಸ್ವಭಾವವು ಆತನಿಗೆ ಯೋಗ್ಯ ಕಂಡದ್ದರಿಂದ ರಾಮಭಾವುವು ತನ್ನ ಶೇಷಾಯುಷ್ಯವನ್ನು ಕಳೆಯುವದಕ್ಕೆ ನಿರ್ಮಲಾ-ನಾರಾಯಣರಾಯರ ಆಗ್ರಹದಮೇರೆಗೆ ಮುಂಬೈಗೆ ಹೊರಟು ಹೋದನು. ಅಲ್ಲಿ ಆತನು ಸುಖದಿಂದ ಕಾಲಕ್ರಮಣ ಮಾಡಲಾರಂಭಿಸಿದನು.

ಪ್ರಿಯವಾಚಕರೇ, ನಮ್ಮ ಈ ಚಿಕ್ಕ ಕಥಾನಕವು ಮುಗಿಯಿತು. ಖಂಡೇರಾಯನಂಥ ದುರ್ಜನರು ಈಗಿನ ಕಾಲದಲ್ಲಿ ಎಷ್ಟು ಜನರು ಹಬ್ಬಿ ಹರಿಬಿದ್ದಿರುವರೆಂಬದನ್ನು ಬರೆದು ತಿಳಿಸಲವಶ್ಯವಿಲ್ಲ. ಆ ಜನರು ವಿಷಕುಂಭದಂತೆ ಬಹಿರಂಗದಲ್ಲಿ ಸಂಭಾವಿತರಂತೆಯೇ ತೋರುವರು. ವಿಷ ತುಂಬಿದ ಕುಂಭವು ಮುಖದ ಮೇಲಿನ ವೇಷ್ಟನವು ಇರುವವರೆಗೆ ಎಲ್ಲರಿಗೂ ಸ್ವಾಭಾವಿಕವಾದ ಕುಂಭದಂತೆಯೇ ಭಾಸವಾಗುವದು; ಆದರೆ ಮುಖದ ಮೇಲಿನ ಅವರಣವು ಬಯಲಾಯಿತೆಂದರೆ ಅದು ಭಯಂಕರವಾದ ವಿಷಕುಂಭವೆಂಬುವದು ಎಲ್ಲರಿಗೂ ಗೊತ್ತಾಗುವದು. ಅದರಂತೆ ದುರ್ಜನರ ಸ್ಥಿತಿಯು ಇರುತ್ತದೆಂದು ಹೇಳಲಾಗುವದು. ಆದ್ದರಿಂದ ಮನುಷ್ಯರ ಸ್ವಭಾವಾದಿಗಳನ್ನು ತಿಳಿಯದೆ ಅರಿಯದವರನ್ನು ಒಮ್ಮೆಲೆ ನಂಬುವದು ಪರಮ ಘಾತುಕವಾಗಿರುತ್ತದೆ. ಈ ಕಥಾನಕದಲ್ಲಿಯ ನಿರ್ಮಲೆಗೆ ಬಂದ ಅನುಭವವು, ಸ್ವಲ್ಪ ಹೆಚ್ಚುಕಡಿಮೆಯಾಗಿ ಜಗತ್ತಿನಲ್ಲಿ ಹಲವು ಜನರಿಗೆ ಬಂದಿರಬಹುದು. ಹಲವು ಜನರ ಅನುಭವವನ್ನು ನೋಡಿ ಓದಿ ತಿಳಿದು ಬುದ್ಧಿವಂತವಾದ ನಮ್ಮ ತರುಣ ಸಮಾಜವು ಇಂಥ ಹಾನಿಗೆ ಗುರಿಯಾಗದಿರಲೆಂಬದೇ ನಮ್ಮ ಆಶಯವು!!

ಸರ್ವೇ ಜನಾಃ ಸುಖಿನೋ ಭವಂತು!!!

—ಸಂಪೂರ್ಣ.—

## ಗೋಂದಾವಲಿಯ
# ಶ್ರೀ ಬ್ರಹ್ಮಚೈತನ್ಯ ಮಹಾರಾಜರ ಚರಿತ್ರ.

ಲೇಖಕ:—ರಾ. ತ್ರ್ಯ. ಕರ್ಮಾರ. ಆನಂದವನ.

ಈ ಸುಪ್ರಸಿದ್ಧ ಸತ್ಪುರುಷರ ಚರಿತ್ರವು ಅಚ್ಚಾಗಿರುತ್ತದೆ. ಇದರಲ್ಲಿ ಶ್ರೀ ಬ್ರಹ್ಮಚೈತನ್ಯ ಮಹಾರಾಜರವರ ಜನ್ಮ, ಬಾಲ್ಯ, ಸದ್ಗುರುಸೇವೆ, ಬ್ರಹ್ಮಾನುಭವ, ಮೊದಲಾದವಿಷಯಗಳು ಬಂದಿರುವವಲ್ಲದೆ, ಅವರ ಬ್ರಹ್ಮಬೋಧವೂ ಸಮಗ್ರವಾಗಿ ಬರುತ್ತದೆ. ಈ ಮಹನೀಯರ ಈ ದಿವ್ಯ ಚರಿತ್ರವು ಮುಮುಕ್ಷುಗಳಿಗೆ ಮಾರ್ಗದರ್ಶಕವಿದ್ದು, ಭಕ್ತಾದಿಗಳಿಗೆ ಆನಂದಕರವಾಗಿರುತ್ತದೆ. ಸಜ್ಜನರ ಲೀಲೆಗಳನ್ನು ಓದುವವರೇ ಧನ್ಯರು! ಗ್ರಾಹಕರು ತ್ವರೆಮಾಡಬೇಕು. ನುಣುಪುಕಾಗದ. ಕ್ರಾ. ಪುಟ ೧೫೦. ಬೆಲೆ ೧೨ ಆ. ಟ. ಖ. ಬೇರೆ.

ವಿಳಾಸ:—ಮ್ಯಾನೇಜರ, ಸ. ಚ., ಪ್ರೋ. ಆನಂದವನ.

---

॥ ಶ್ರೀ ॥

# ಇಂದುಮುಖಿ

ಅಥವಾ

## ನಾಲ್ವರೇ ಸಾಕ್ಷಿದಾರರು.

(ಪತ್ತೇದಾರಿಯ ಕಥೆ.)

ಲೇಖಕ:—ಘ. ಪ. ಶಿಂಳೆ, ಆನಂದವನ.

ನಮ್ಮ ಭಗವಾನದಾಸ, ವಿಚಿತ್ರಚಟಗಳೆಂಬ ಶ್ರೇಷ್ಠ ಪತ್ತೇದಾರಿ ಕಾದಂಬರಿಗಳಂತೆ ಇದಾದರೂ ಅತ್ಯಂತ ಮನೋಹರವಾದ ಪತ್ತೇದಾರಿಯ ಕಥೆಯಾಗಿರುತ್ತದೆ. ನುಣುಪು ಕಾಗದ. ಕ್ರಾಉನ ೧೦೦ ಪುಟ. ಬೆಲೆ ೮ ಆ. ಟ. ಖ. ಬೇರೆ.

ವಿಳಾಸ:—ಮ್ಯಾನೇಜರ ಸ. ಚ., ಆನಂದವನ.